


ಆಕಾಶ ಕೋಟೆಯ್ನು ಹಾಗೆ ಭರತ ಖಂಡವನ್ನು ಪರರಾಜ್ಯಗಳ ದಾಳಿಯ ಭಯದಿಂದ ಕಾಪಾಡಲು ಭಗವಂತನೇ ನಿರ್ಮಿಸಿದಂತೆ ಸಾಲಾಗಿ ಹರಡಿಕೊಂಡಿರುವ ಹಿಮಾಲಯ ಪರ್ವತಗಳ ಸಾಲು. ಆ ಸಾಲಿನ ಮಧ್ಯದಲ್ಲಿದ್ದ ಒಂದು ಬೆಟ್ಟದ ಶಿಖರದ ಮೇಲೆ ಸತ್ಯಾನಂದ ಮುನಿ ನಿಂತುಕೊಂಡು ಸುತ್ತುಮುತ್ತಲೂ ತನ್ನ ದೃಷ್ಟಿ ಸಾರಿಸಿಕೊಂಡಿದ್ದನು. ಕೆಳಭಾಗದ ಕಣಿವೆ ಪ್ರಾಂತ್ಯದಲ್ಲಿ ತೇಲಾಡುವ ಮಂಜಿನ ಮೇಲೆ ಆಗತಾನೇ ಉದಯಿಸುವ ಸೂರ್ಯನ ಕೆಂಗಿರಣಗಳು ಬಂಗಾರದ ಛಾಯೆಯ ಕಾಂತಿಯಿಂದ ಪ್ರಕಾಶಮಾನವಾಗಿ ಹೊಳೆಯುತ್ತಿದ್ದಿತು. ಕಣಿವೆಯ ಕೆಳಗೆ ಚಿಕ್ಕ ನದಿಗಳೂ ಅದರಾಚೆ ವಿಸ್ತಾರವಾದ ಮೈದಾನ ಪ್ರದೇಶವೂ ಕಾಣುತ್ತಿದ್ದುವು. ದುರ್ಗಮವಾಗಿದ್ದರೂ ಸುಂದರವಾಗಿದ್ದಿತು.

ಮುನಿ ಮೂಡು ದಿಕ್ಕಿನ ಕಡೆಗೆ ಒಂದು ಸಾರಿ ನೋಡಿ ಮತ್ತೆ ಕಣಿವೆಯ ಕಡೆಗೆ ದೃಷ್ಟಿಯನ್ನು ಹೊರಳಿಸಿದನು. ಅವನ ಮನೋ ಭೂಮಿಯಲ್ಲಿ ಏನೇನೋ ಆಲೋಚನೆಗಳು ಹೊರಳುತ್ತಿದ್ದುವು. ಏನು ಭಗವಂತನ ಮಹಿಮೆಯೋ! ಎಷ್ಟೊಂದು ಸುಂದರವಾದ ಪ್ರಕೃತಿಯನ್ನು ಸೃಷ್ಟಿಸಿದ್ದಾನೆ! ಭೂಮಿಯೇ ಒಂದು ಸುಂದರ ಸ್ಥಳವಾದರೆ ಅದರ ಮೇಲೆ ಹಾರಾಡುವ ಸೌಂದರ್ಯ ರೂಪಭೇದಗಳಿಂದ ಕಾಣುವ ಪಕ್ಷಿಗಳ ಅಂದಚೆಂದಗಳೆಷ್ಟು! ಮೃಗಗಳ ವೈವಿಧ್ಯತಾ ಸೌಂದರ್ಯ ವೈಭವವೆಷ್ಟು! ತರುಲತಾದಿಗಳ ವರ್ಣಜಾಲಗಳೇನು! ಇವುಗಳನ್ನೆಲ್ಲಾ ಅನುಭವಿಸಲಿಕ್ಕೇ ಮನುಷ್ಯನನ್ನು ಸೃಷ್ಟಿಸಿ ಅವನಿಗೆ ಅದ್ಭುತವಾದ ಮೆದುಳನ್ನು ಕೊಟ್ಟಿದ್ದಾನೆ!

ಹೀಗೆ ಮನುಷ್ಯನಿಗೆ ಇಂತಹ ಪ್ರಕೃತಿದತ್ತ ವೈಭವಗಳನ್ನು ತಿಳಿದುಕೊಳ್ಳುವ ಶಕ್ತಿಯೂ ಬಂದಿದೆ. ವಿವೇಕವೂ ಇದೆ. ಭಗವತ್ಪ್ರಸಾದವಾದ ಈ ಮೆದುಳಿನಿಂದ, ಒಳಿತಿನೊಳಗೆ ಸೇರಿಕೊಳ್ಳುವ ಕೆಡುಕುಗಳನ್ನು ತಿಳಿದುಕೊಳ್ಳುವ ಜ್ಞಾನವು ವಿಶೇಷವಾಗಿರುವುದು ಮನುಷ್ಯ ಪ್ರಾಣಿಗೆ ಮಾತ್ರವೇ. ಅದರಿಂದ ತನ್ನನ್ನು ತಾನೇ ತಿಳಿದುಕೊಳ್ಳುವಂತೆ



ಬಿಟ್ಟಿದ್ದಾನೆ ಭಗವಂತ. ಆದುದರಿಂದಲೇ ಪ್ರಪಂಚವು ಅಜ್ಞಾನಿಗಳ ಪರವಾದುದೇ ಹೆಚ್ಚು. ಪ್ರಪಂಚದ ಸುಖಭೋಗಗಳೆಲ್ಲಾ ತಮ್ಮದೇ ಎಂಬ ಸ್ವಾರ್ಥ ಭಾವನೆ ಇಲ್ಲದಿದ್ದರೆ ಭೂಮಿ ಇನ್ನೆಷ್ಟು ಸುಂದರವಾಗಿರುತ್ತಿತ್ತೋ! ಅದನ್ನೂ ನೋಡಿಬಿಡಬೇಕು. ಇನ್ನೊಬ್ಬರಿಗೆ ಒಳಿತನ್ನು ಹೊರತು ಕೆಡುಕನ್ನು ಮಾಡದ ನೂತನ ಮಾನವ ಜಾತಿಯ ಆವಿರ್ಭಾವ ಏಕೆ ಆಗಬಾರದು? ತಾನು ಸಾಧಿಸಿದ ತಪೋಮಹಿಮೆಯ ವಿಶೇಷ ಶಕ್ತಿಯಿಂದ ಹಾಗೆ ಮಾಡಿ ನೋಡಲೇಬೇಕು.

ಈ ಪ್ರಶ್ನೆಯೇ ಸತ್ಯಾನಂದ ಮುನಿಯ ಮನಸ್ಸಿನೊಳಗಿತ್ತು. ಸುದೀರ್ಘವಾದ ಆಲೋಚನೆಯಿಂದ ಅವನು ಒಂದು ನಿರ್ಣಯಕ್ಕೆ ಬಂದನು. ಪ್ರಕೃತಿ ರಹಸ್ಯಗಳನ್ನು ಮಥನ ಮಾಡಿಕೊಂಡು ಸತ್ಯಾನಂದ ಮುನಿ ತನ್ನ ಯೋಗಶಕ್ತಿಯಿಂದ ಎಷ್ಟೋ ಪ್ರಯೋಗಗಳನ್ನು ಮಾಡಿದ್ದನು. ಅಂತಲೇ ಅವನು ತನ್ನ ಚಿರಕಾಲದ ವಾಂಛೆಯನ್ನು ಕಾರ್ಯರೂಪಕ್ಕೆ ತರಲು ಈಗ ಸಂಕಲ್ಪ ಮಾಡಿಕೊಂಡನು. ಇದರಲ್ಲಿ ತನ್ನ ಸ್ವಾರ್ಥವೇನೂ ಇಲ್ಲದ್ದರಿಂದ ತಪ್ಪಾಗದೆಂದುಕೊಂಡನು. ಭಗವತ್ಸಂಕಲ್ಪಕ್ಕೆ ವಿರೋಧವಾದರೆ ದಯಾಮಯನಾದ ಅವನು ಕ್ಷಮಿಸದಿರಲಾರನೆಂಬ ಧೈರ್ಯ ಸತ್ಯಾನಂದ ಮುನಿಗೆ.

ಮುನಿ ಕೆಳಗಿಳಿದು ಬಂದುದನ್ನು ನೋಡಿ ಗುಹೆಯೊಳಗಿದ್ದ ಅವನ ಶಿಷ್ಯನು ಹೊರಗೆ ಬಂದು, "ಗುರುವರ್ಯರೇ! ಶುಭ ಗಳಿಗೆಗಳು ಬಂದಿವೆ!" ಎಂದನು ಕೈಮುಗಿಯುತ್ತ.

"ಹೌದು ಸೋಹಂ, ಯಜ್ಞವನ್ನು ಪರಿಸಮಾಪ್ತಿ ಮಾಡಬೇಕು, ಇದೋ ಬರುತ್ತೇನೆ" ಎಂದನು ಸತ್ಯಾನಂದ ಮುನಿ.

ಇಬ್ಬರೂ ಕೂಡಿ ಗುಹೆಯೊಳಗೆ ಹೋದರು. ಗುಹೆಗೆ ಎರಡು ಬದಿಗಳಲ್ಲಿ ದ್ವಾರಮಾರ್ಗಗಳಿದ್ದುವು. ಗುಹೆಯ ಮಧ್ಯದಲ್ಲಿ ಹೋಮಕುಂಡವು ಉರಿಯುತ್ತಿತ್ತು. ಅದರ ಪ್ರಕಾಶದಿಂದ ಗುಹೆಯೊಳಗೆ ಬೆಳಕಾಗಿತ್ತು.

ಸತ್ಯಾನಂದ ಮುನಿ ಹೋಮಕುಂಡದ ಮುಂದೆ ಕುಳಿತುಕೊಂಡು, "ಅಲ್ಲಿಯೇ ನಿಲ್ಲು ಸೋಹಂ. ಕುಂಡದ ಅಗ್ನಿಯನ್ನು ಜಾಗರೂಕತೆಯಿಂದ ನೋಡಿಕೊಂಡಿರು. ಅಗ್ನಿಯ ಜ್ವಾಲೆಗಳು ಕ್ರಮಕ್ರಮವಾಗಿ ಮೇಲೇಳಬೇಕು. ಆಗಲೇ ನಾವು ತಲೆಹಾಕಿದ ಕಾರ್ಯವು ಕೈಗೂಡುತ್ತದೆ" ಎಂದು ಕಣ್ಣು ಮುಚ್ಚಿಕೊಂಡು ಸ್ವಲ್ಪಹೊತ್ತು ಧ್ಯಾನಿಸುತ್ತಾ ಕುಳಿತನು.

ಆಮೇಲೆ ಅರೆಗಣ್ಣು ತೆರೆದು ಮಂತ್ರಗಳನ್ನು ಉಚ್ಚರಿಸುತ್ತ, ಬೆಣ್ಣೆಯನ್ನೂ, ಕೆಲವು ಪುಷ್ಪಗಳನ್ನೂ, ಮತ್ತೆ ಕೆಲವು ಪತ್ರಗಳನ್ನೂ ಮಧ್ಯೆ ಮಧ್ಯೆ ಮಂತ್ರಿಸಿದ ವಿಭೂತಿ ಮತ್ತು ಕುಂಕುಮಗಳನ್ನೂ ಹೋಮಾಗ್ನಿಗೆ ಹಾಕುತ್ತ ಆಹುತಿ ಸಮರ್ಪಣೆಯ ಮುದ್ರೆ ತೋರಿಸುತ್ತಿದ್ದನು.



ಅಗ್ನಿಜ್ವಾಲೆಗಳ ಮಧ್ಯೆ ಕ್ರಮವಾಗಿ ಒಂದು ರೂಪವು ಏರ್ಪಡುವುದನ್ನು ನೋಡಿ ಮುನಿಯ ಕಣ್ಣು ಹೊಳೆಯತೊಡಗಿದುವು. ನೋಡನೋಡುತ್ತಿದ್ದಂತೆ ಅದೊಂದು ಮಾನವ ರೂಪವಾಯಿತು. ಮರುಕ್ಷಣದಲ್ಲಿ ಬೆಂಕಿಯ ಜ್ವಾಲೆಗಳ ನಡುವಿನಿಂದ ಹೊರಗೆ ಹಾರಿದ ಆ ಮನುಷ್ಯನಿಗೆ ಎಲ್ಲಾ ಅವಯವಗಳೂ ಇದ್ದುವು. ಸುಂದರವಾದೊಂದು ಬೊಂಬೆಯ ಹಾಗೆ ಕಾಣುತ್ತಿದ್ದನು. ಆದರೆ ಬೊಂಬೆಯ ಹಾಗಿರದೆ ಎತ್ತರವಾಗಿದ್ದಾನೆ. ಕುಳ್ಳ ಮನುಷ್ಯ! ಚುರುಕಿನ ಅಸದೃಶ ಕಳೆ! ಎಷ್ಟು ಹಗುರೋ ಎಂಬ ಹಾಗೆ!

ಆ ಬೊಂಬೆ ಮನುಷ್ಯನು ಮುನಿಗೆ ಬಗ್ಗಿ ನಮಸ್ಕಾರ ಮಾಡಿ "ನಾನು ಯಾರು ?" ಎಂದು ಕೇಳಿದನು.

"ನೀನು ಮನುಷ್ಯನು. ಆದರೆ ಸಾಧಾರಣದ ಮನುಷ್ಯನಲ್ಲ. ಮನುಷ್ಯರಿಗಿಂತ ವ್ಯತ್ಯಾಸವಿರುವವನು. ಯಜ್ಞದ ಮೂಲಕ ಪಂಚಭೂತಗಳ ಅಂಶಗಳನ್ನು ಸೇರಿಸಿ ನಿನ್ನನ್ನು ಸೃಷ್ಟಿ ಮಾಡಿದ್ದೇನೆ. ನಿನಗೆ ಪಂಚಭೂತಗಳ ಎಲ್ಲಾ ಶಕ್ತಿಗಳೂ ಇವೆ. ಒಳ್ಳೆಯದು, ಕೆಟ್ಟುದೂ, ಕರುಣೆಯೂ, ಕ್ರೌರ್ಯವೂ, ಸತ್ಯವೂ, ಅಸತ್ಯವೂ ಹೀಗೆ ಪ್ರಪಂಚದಲ್ಲಿರುವುದೆಲ್ಲಾ ನಿನಗೆ ಗೊತ್ತಿರುತ್ತವೆ. ಆದರೆ ಕೆಡುಕಿನ ಮೇಲೆ, ಅಸತ್ಯದ ಮೇಲೆ, ಕ್ರೌರ್ಯದ ಮೇಲೆ ನಿನಗೆ ಆಸಕ್ತಿ ಹುಟ್ಟಲಾರದು. ಸಾಧಾರಣವಾಗಿ ಪ್ರಪಂಚದ ಮನುಷ್ಯರು ತಮ್ಮ ಕೋರಿಕೆಗಳನ್ನು ನೆರವೇರಿಸಿಕೊಳ್ಳಲು ನಾನಾ ಬಗೆಯಾಗಿ ಪ್ರಯತ್ನಪಡುತ್ತಾ ಇರುತ್ತಾರೆ. ಆದರೆ ನೀನು ಧರ್ಮ ರಕ್ಷಣೆಯೇ ನಿನ್ನ ಉದ್ದೇಶವಾಗಿ ಜೀವಿತಾಂತದವರೆಗೂ ಸಂಚರಿಸುವಿ. ನಿನ್ನ ಮೂಲಕ ನನ್ನ ಕನಸು ಫಲಿಸಿತೆಂದಾದರೆ ನೂತನ ಮಾನವ ಜಾತಿಗೆ ನೀನೇ ಮಾರ್ಗದರ್ಶಕನಾಗುವಿ!" ಎಂದು ಸತ್ಯಾನಂದ ಮುನಿ ಹೇಳಿದನು.

"ಹೌದು! ಎಲ್ಲಾ ಭಾಷೆಗಳೂ ನನಗೆ ಗೊತ್ತಿವೆ! ಅನುಗ್ರಹೀತನಾದೆನು. ಆದರೆ ನಾನು ಎಲ್ಲರಿಗಿಂತ ಕುಳ್ಳನಾಗಿರುವೆನಷ್ಟೆ? ಹೀಗೇಕಾಗಿರುವೆನು?" ಎಂದು ಕೇಳಿದನು ಬೊಂಬೇ ಮನುಷ್ಯ.

"ನೀನು ಎಲ್ಲರಂಥವನಲ್ಲವೆಂದು ಆಗಲೇ ಹೇಳಿದೆನಷ್ಟೇ? ಪ್ರತ್ಯೇಕದವನಾದ ನಿನ್ನ ಮನಸ್ಸು ಸಾಧಾರಣದವರ ಆಲೋಚನೆಗಳನ್ನು ಮೀರಿಸುವಷ್ಟು ಉನ್ನತವಾಗಿರುತ್ತದೆ. ಎಲ್ಲರಿಗಿಂತಲೂ ಹೆಚ್ಚಿನ ಶಕ್ತಿ ಯುಕ್ತಿಗಳು ನಿನಗಿವೆ. ನಿನ್ನ ಬುದ್ಧಿಯ ಬೆಳವಣಿಕೆಯೂ ಉನ್ನತವೇ. ಸಾಧಾರಣ ಮನುಷ್ಯರಲ್ಲಿ ಒಂದು ಉನ್ನತವಾಗಿದ್ದರೆ ಇನ್ನೊಂದು ಚಿಕ್ಕದಾಗಿರುತ್ತದೆ. ಇದು ಪ್ರಕೃತಿ ನೈಜತೆ. ನಿನ್ನ ಶರೀರವು ಚಿಕ್ಕದೇ ಆದರೂ ಶರೀರ ಶಕ್ತಿಗೆ ಎಣೆಯೇ ಇಲ್ಲ. ನೀನು ಮಾನವ ಜಾತಿಯ ಮೇಲ್ಮೆಗೂ, ಆ ಮೂಲಕ ಪ್ರಪಂಚದ ಅಭ್ಯುದಯಕ್ಕೂ ತಕ್ಕ ಹಾಗೆ ಕಾರ್ಯ ಮಾಡಬೇಕು. ನಿನ್ನ ಈ ಸಣ್ಣ

ಹಗುರು ಶರೀರವು ಶೀಘ್ರಗಮನಕ್ಕೆ ಅನುಕೂಲ ವಾಗಿರುತ್ತಗೆ" ಎಂದು ಹೇಳಿ, ಸ್ವಲ್ಪ ಹೊತ್ತು ಮೌನವಹಿಸಿದ ಮುನಿ ಮತ್ತೆ "ಆದರೂ ನೀನು ಯಾವಾಗಲೂ ಕುಳ್ಳನಾಗಿಯೇ ಇರಲಾರಿ. ನಿನ್ನ ಜೀವನದ ಕೊನೆಯ ದಶೆ ಹೋರಾಟಗಳಿಂದ ಕೂಡಿರುತ್ತದೆ. ದ್ರೋಹದಂಥ ಅನೇಕ ಬಗೆಯ ಕ್ರೂರ ಶಕ್ತಿಗಳೊಂದಿಗೆ ನೀನು ಕಾದಾಡಬೇಕಾದೀತು. ಕೊನೆಗೆ ನಿನಗೆ ಶಾಂತಿಯುತನಾಗುವ ಕಾಲ ಬರುತ್ತದೆ. ಆಗ ನಿನ್ನ ಶರೀರ ಸಾಧಾರಣ ಮಾನವ ನಂತಾದೀತು. ಅದು ಯಾವಾಗ ಹೇಗೆ ಎಂಬುದನ್ನು ಕಾಲವೇ ನಿರ್ಣಯಿಸುತ್ತದೆ!" ಎಂದನು.

"ನಿಮ್ಮಾಪ್ಪಣೆ ಶಿರದೊಳಾಂತೆನು!" ಎಂದನಾ ಕುಳ್ಳಪ್ಪ.

ಆಮೇಲೆ ಬೊಂಬೆ ಮನುಷ್ಯನಿಗೆ "ಅಪೂರ್ವ" ನೆಂದು ನಾಮಕರಣ ಮಾಡಿದನು.

ಅನಂತರ ಮುನಿಯ ಅಪ್ಪಣೆಯಂತೆ ಅಪೂರ್ವನ ಮುಂದೆ ಕೆಲವು ಫಲಗಳನ್ನು ತಂದನು ಸೋಹಂ ಶಿಷ್ಯ.

"ಅಪೂರ್ವಾ! ಈ ಹಣ್ಣು ತಿಂದವರಿಗೆ ಬಹಳ ದಿನಗಳವರೆಗೆ ಹಸಿವು ನೀರಡಿಕೆಗಳು ಇರಲಾರವು" ಎಂದನು ಮುನಿ.

"ಮಹಾತ್ಮರೇ. ಧನ್ಯವಾದಗಳು! ನಾನು ಇನ್ನು ಗುಹೆಯಿಂದ ಹೊರಗೆ ಹೋಗಲು ಅಪ್ಪಣೆಯೇ?" ಎಂದನು ಅಪೂರ್ವ.

"ಹೋಗಬಹುದು. ಗುಹೆಯಿಂದ ವಿಶಾಲ ಪ್ರಪಂಚಕ್ಕೆ ಹೋಗು" ಎಂದು ಮುನಿಯು ಅನುಮತಿಯಾಯಿತು.

ಅಪೂರ್ವನು ಭಕ್ತಿಯಿಂದ ಮುನಿಗೆ ನಮಸ್ಕಾರ ಮಾಡಿ ಗುಹೆಯೊಳಗಿನಿಂದ ಹೊರಗೆ ಬಂದು ನಡೆಯತೊಡಗಿದನು. ಅವನ ಹಿಂದೆಯೇ ಮುನಿಯೂ ಶಿಷ್ಯನೂ ಹೊರಗೆ ಬಂದರು.

ಬೆಚ್ಚಗಿನ ಸೂರ್ಯನ ಕಿರಣಗಳು ಅವನ ಶರೀರ ದಲ್ಲಿ ಸ್ಪರ್ಶವಾಗುತ್ತಲೇ ಅಪೂರ್ವನು "ಆಹ! ಏನು ಸುಖ! ಎಂಥಾ ಹಾಯಿ! ಏನು ಮಧುರ!" ಎಂದು ಹೇಳಿದನು.



Scanned by CamScanner



"ಕಂದಾ, ನಿನ್ನ ಮಧುರಾನುಭೂತಿ ಶಾಶ್ವತವಾಗಿರಲೆಂದು ಆಶೀರ್ವಾದ ಮಾಡುತ್ತೇನೆ. ಸತ್ಯಕ್ಕೂ ಪ್ರಪಂಚವು ತುಂಬಾ ಮಧುರವೇ ಆಗಿದೆ. ಆದರೆ ಮನುಷ್ಯರು ತಮ್ಮ ನೀಚ ಕೃತ್ಯಗಳಿಂದ ಕಹಿಯನ್ನು ಹರಡಿಕೊಂಡಿರುತ್ತಾರೆ. ನೀನು ನಿನ್ನ ಪಾಲಿನ ಕರ್ತವ್ಯವನ್ನು ನಿರ್ವಹಿಸಬೇಕು. ಒಳ್ಳೆಯದೇ ನಿನ್ನ ಲಕ್ಷ್ಯವಾಗಿರಲಿ! ಮಹೋನ್ನತವಾದ ಕಾರ್ಯರಂಗದಲ್ಲಿ ಮುಂದುವರಿಯಪ್ಪಾ" ಎಂದನು.

ಅಷ್ಟು ಕೇಳಿದ ಕೂಡಲೇ ಅಪೂರ್ವನ ಹುಬ್ಬುಗಳು ಗಂಟಿಕ್ಕಿಕೊಂಡುವು. "ಇದೇನು ಕೇಳುತ್ತಾ ಇದೆ! ಇದೆಲ್ಲಿಯ ಆರ್ತನಾದಗಳು! ಅದಿಗೋ! ಅಲ್ಲಿ ಅಗ್ನಿ ಜ್ವಾಲೆಗಳು! ಏನದು? ಏನಾಯಿತು ಅಲ್ಲೆಲ್ಲಾ? ಕರುಳು ಕರಗಿಸುವ ಆರ್ತನಾದ ಯಾರದು?" ಎಂದನು ಆತ್ಮಾವೇದನೆಯಿಂದ ಅಪೂರ್ವ.

"ಎಲ್ಲಿ? ನಮಗೇನೂ ಕೇಳುವುದೇ ಇಲ್ಲ! ಕಾಣುವುದೂ ಇಲ್ಲವಲ್ಲಾ!" ಎಂದನು ಸೋಹಂ.

"ಹೌದು ಸೋಹಂ. ನಾವು ಕೇಳಲಾರೆವು. ನೋಡಲಾರೆವು. ನಮಗಿಂತಲೂ ಅಪೂರ್ವನ ಇಂದ್ರಿಯ ಶಕ್ತಿ ಅಪಾರ! ದೂರದಲ್ಲಿ ನಮಗೆ ಕಾಣದ ಕೇಳದಂಥವುಗಳನ್ನು ಅಪೂರ್ವನು ಸರ್ವ ಸಾಧಾರಣವಾಗಿಯೇ ಕಾಣಬಲ್ಲನು. ಕೇಳಬಲ್ಲನು. ಅಷ್ಟೇ ಅಲ್ಲ, ವಾಯು ವೇಗದಿಂದ ಪ್ರಯಾಣ ಮಾಡುವ ಸಮರ್ಥನೂ ಕೂಡಾ, ಹಾಗೆಯೇ ನೋಡುತ್ತಿರು" ಎಂದು ಹೇಳಿದನು ಮುನಿ.

"ಅಪ್ಪಾ, ಅಲ್ಲೇನು ನಡೆಯುವುದೆಂದು ನೋಡಲು ಅನುಮತಿಯೇ?" ಎಂದನು ಅಪೂರ್ವ.

"ಹೋಗಪ್ಪಾ, ಹೋಗು! ದೇವರೇ ನಿನಗೆ ಜತೆ!" ಎಂದು ಹರಸಿದನು ಮುನಿ.

ಮರುಕ್ಷಣವೇ ಅಪೂರ್ವನು ಓಡತೊಡಗಿದನು. ಓಡುತ್ತಿದ್ದಂತೆ ಅವನು ಒಂದು ಗಾಜಿನ ಬೊಂಬೆಯ ರೂಪಕ್ಕೆ ಮಾರ್ಪಟ್ಟು ಆಮೇಲೆ ಎತ್ತ ತಿರುಗಿದನೆಂದೇ ಕಾಣದಂತಾದನು.

ನೋಡುತ್ತಾ ಇದ್ದ ಸೋಹಂ "ಇದೇನಿದೇನು! ಇದ್ದಕ್ಕಿದ್ದ ಹಾಗೆ ಅವನು ಹೊಳೆಯುತ್ತಾ ಇದ್ದು ಫಕ್ಕನೆ ಮಾಯವೇ ಆದನಲ್ಲಾ!" ಎಂದನು.

"ವೇಗವು ಅತ್ಯಂತ ಹೆಚ್ಚಿಬಿಟ್ಟರೆ ಅದು ಬೆಳಕು ಮತ್ತು ಗಾಳಿಯಲ್ಲಿ ಸೇರಿ ಕಾಣದೆ ಹೋಗುವುದು ಸಹಜವೇ. ಸಾಧಾರಣ ಕಣ್ಣಿಗೆ ಕಾಣುವುದಿಲ್ಲ" ಎಂದನು ಮುನಿ.

* * *

"ಏನೇನು! ಅಷ್ಟು ಗರ್ವವೇ ನಿಮಗೆ! ಜಮೀನ್ದಾರ್ರ ಕಟ್ಟಡದ ಕೆಲಸಕ್ಕೆ ಬರಲಾರೆವೆನ್ನಲು ಏನು ಧೈರ್ಯ ನಿಮಗೆ! ಹಾಗಾದರೆ ನಿಮ್ಮ ಕೊಂಪೆಯಲ್ಲಿ ಬದುಕುವ ಪ್ರಾಪ್ತಿ ನಿಮಗಿಲ್ಲ!" ಎಂದು ಕೋಪದಿಂದ ಅರಚಿ ಹೇಳುತ್ತಾ, ಉರಿಯುವ ದೊಂದಿಯೊಂದಿಗೆ ಕೆಲವರು ದೃಢಕಾಯರು ಗುಡಿಸಲುಗಳಿಗೆ ಬೆಂಕಿ ಹಚ್ಚುತ್ತಿದ್ದರು.

"ಎಷ್ಟು ಕಾಲ ಹೀಗೆ ಕೆಲಸ ಮಾಡೇವಯ್ಯಾ! ಅವರು ಕಟ್ಟುವ ಭವನಕ್ಕೆ ಹೀಗೆ ದಂಡ ಕೆಲಸ ಮಾಡಿ ಮಾಡಿ ಸೋತೆವು! ನಮಗೂ ಹೆಂಡತಿ ಮಕ್ಕಳಿದ್ದಾರೆ. ಅವರನ್ನೂ ಕಾಪಾಡಬೇಕಷ್ಟೇ? ಏನು ಪುಣ್ಯಾಂತ ಹೀಗೆ ಧರ್ಮಕ್ಕೆ ಚಾಕರಿ ಮಾಡಿಕೊಂಡು ಹೋದರೆ ನಮ್ಮ ಹೊಟ್ಟೇ ಗತಿ ಏನು? ನಮ್ಮ ಹೆಂಡತಿ ಮಕ್ಕಳು ಹೇಗೆ ದಿನ ಕಳೆದಾರು!..." ಎಂದು ರೋದಿಸುವವರ ಆರ್ತನಾದಗಳನ್ನು ಲಕ್ಷಿಸುವವರಾರೂ ಇರಲಿಲ್ಲ. ಒಂದೇ ಗೋಳು! ಗಲಾಟೆ! ಗದ್ದಲ! ಗರ್ಜನೆ!

ಗರ್ವ ತುಂಬಿದ ಜಮೀನ್ದಾರ್ರ ನೌಕರ ಬಂಟರು ಆ ಬಡ ಕೂಲಿಗಳ ಮಾತು ಕೇಳಲಿಲ್ಲ. ದಿಕ್ಕುಗಳು ಪ್ರತಿಧ್ವನಿಸುವ ಹಾಗೆ ವಿಕಟಾಟ್ಟಹಾಸ ಮಾಡುತ್ತ, ತಡೆಯುವವರನ್ನು ಆಚೀಚೆ ದೂಡಿ, ಗುಡಿಸಲುಗಳಿಗೆ ಬೆಂಕಿ ಹಚ್ಚತೊಡಗಿದರು. ಒಂದೊಂದೇ ಗುಡಿಸಲು ಅಗ್ನಿಜ್ವಾಲೆಗೆ ಆಹುತಿಯಾಗುತ್ತಾ ಇದ್ದಿತು. ಹೊಟ್ಟೆಗಳೊಳಗಂತೂ ಕಾಣದ ಉರಿ.

ಹಠಾತ್ತಾಗಿ ಅಗ್ನಿಜ್ವಾಲೆಗಳ ಮೇಲೆ ಮಳೆಯ ಹನಿಗಳು ಬೀಳಲು ಪ್ರಾರಂಭವಾಯಿತು. ಜಮೀನ್ದಾರ್ರ ನೌಕರರು ಆಕಾಶಕ್ಕೆ ತಲೆಯೆತ್ತಿ ನೋಡಿದರು. ಮೇಘ ಯಾವುದೂ ಕಾಣಲಿಲ್ಲ. ಮೋಡವೇ ಇಲ್ಲದೆ ಮಳೆ ಹೇಗೆ ಬರುತ್ತಾ ಇದೆ? ಆಗ ವಿಚಿತ್ರವಾದ ಒಂದು ಧ್ವನಿ ಕೇಳತೊಡಗಿತು. ಎಲ್ಲರೂ ಆ ಧ್ವನಿ ಬರುವ ದಿಕ್ಕಿನ ಕಡೆಗೆ ನೋಡಿದರು. ಊರಿನ ಬದಿಯಲ್ಲಿ ಹರಿಯುವ ಮೊಣಕಾಲುದ್ದ ನೀರಿನಲ್ಲಿ ನಿಂತಿರುವ ಆನೆಗಳ ಗುಂಪು ಕಂಡಿತು! ಆನೆಗಳು ತಮ್ಮ ಸೊಂಡಿಲಿನೊಳಗೆ ನೀರನ್ನು ಹೀರಿ ಹೀರಿ ಉರಿಯುವ ಬೆಂಕಿಯ ಮೇಲೆ ಹಾರಿಸುತ್ತಿದ್ದುವು. ಕೊಬ್ಬಿದ ನೌಕರರು ಆನೆಯ ಕಡೆಗೆ ನೋಡಿದ ಕೂಡಲೇ ಅವುಗಳೆಲ್ಲಾ ಮೇಲೆದ್ದು ನೀರು ಚಿಮುಕಿಸುತ್ತ ಅವರನ್ನು ಹೊಡೆಯಲು ಘೀಂಕರಿಸುತ್ತ ಓಡಿ ಬರತೊಡಗಿದುವು! ಕೂಡಲೇ ನೌಕರ ಬಂಟರೆಲ್ಲಾ ಹಾರಿ ಬಿದ್ದೆದ್ದುಕೊಂಡು ದಿಕ್ಕಿಗೊಬ್ಬರಂತೆ ಓಡಿ ಹೋದರು. ಎಲ್ಲರಿಗೂ ಪ್ರಾಣಭೀತಿ ಹಿಡಿಯಿತು. ಅಷ್ಟರಲ್ಲಿ ಹಿಂದಿನಿಂದ ಯಾರೋ ಗಹಗಹಿಸಿ ನಗುವ ಶಬ್ದ ಕೇಳಿಸಿತು. ಗಾಳಿಯೇ ನಗುವ ಹಾಗೆ ಯಾರದು? ಏನದು? ಬೊಂಬೆಯಂತಹ ವ್ಯಕ್ತಿಯೊಬ್ಬನು ದೊಡ್ಡದೊಂದು ಆನೆಯ ಮೇಲೆ ನಿಂತು ನಲಿಯುತ್ತ ನಗುತ್ತಿದ್ದನು.

ಯಾರು ಆ ವಿಚಿತ್ರವಾದ ವ್ಯಕ್ತಿ? ದೇವನೋ, ದೆವ್ವನೋ! ಅಲ್ಲ ಕಾಡಿನ ಮನುಜನೋ! ಏನು ಕೇಡು ಬಂತೋ ಎಂದು ಎಲ್ಲರೂ ಹೆದರಿ ದಿಕ್ಕು ತೋಚದಂತಾದರು!

(ಇನ್ನೂ ಬರುತ್ತದೆ)





# ಅಪೂರ್ವನ ಸಾಹಸ ಯಾತ್ರೆಗಳು

೩

[ ಸದಾನಂದ ಮುನಿ ತನ್ನ ತಪಸ್ಸಿನ ಶಕ್ತಿಯಿಂದ ಯಜ್ಞದ ಮೂಲಕ ಸೃಷ್ಟಿಸಿದ ವಿಚಿತ್ರ ಶಕ್ತಿಯ ಅಪೂರ್ವನು ಎಲ್ಲಿಯೋ ಬಡವರ ಗುಡಿಸಲಿಗೆ ಬೆಂಕಿ ಹಚ್ಚುವವರನ್ನು ಆನೆಗಳ ಸಹಾಯದಿಂದ ಹೆದರಿಸಿ ಗುಡಿಸಲುಗಳನ್ನು ಕಾಪಾಡಿದನು. ಆಮೇಲೆ ದಾರಿಹೊಡಕ ಕಳ್ಳರು ತಮ್ಮ ದೇವತೆಗೆ ಬಲಿ ಕೊಡಲು ಒಯ್ದ ಸಮೀರನೆಂಬ ಹುಡುಗನನ್ನು ಕಾಪಾಡಿ ಅವನ ಗ್ರಾಮದ ಮೇರೆಯಲ್ಲಿ ಬಿಟ್ಟು ಹೋಗಿಬಿಟ್ಟನು. ಅನಂತರ— ]

ಸಮೀರ ಬಾಲಕನು ಸುರಕ್ಷಿತನಾಗಿ ಬರುವುದನ್ನು ಅಷ್ಟು ದೂರದಿಂದಲೇ ನೋಡಿದ ಗ್ರಾಮಸ್ಥರು ಹಿಡಿಸಲಾರದಷ್ಟು ಸಂತೋಷದಿಂದ ಅವನ ಕಡೆಗೆ ಓಡಿಬಂದರು.

ಆ ದಾರಿಯಾಗಿ ಹೋಗುತ್ತಿದ್ದ ರಾಜಸೇನಾನಿ, ಸೈನಿಕರೊಂದಿಗೆ ಏನಿದೆಂದುಕೊಂಡು ನಿಂತನು.

ಸಮೀರನ ತಾಯಿಯಂತೂ "ಬಂದೆಯಾ ನನ್ನ ಕಂದಾ !" ಎಂದು ಆತುರಾನಂದ ಉದ್ವೇಗದಿಂದ ಓಡುತ್ತಾ ಬಂದು ಅವನನ್ನು ಆಲಿಂಗಿಸಿಕೊಂಡು ಬಾಷ್ಪದ ಅಭಿಷೇಕವನ್ನೇ ಮಾಡಿದಳು.

ಗ್ರಾಮಾಧಿಕಾರಿ ಆಶ್ಚರ್ಯದಿಂದ ಸಮೀರನ ಹತ್ತಿರ ಬಂದು ಮೆಚ್ಚಿಕೊಳ್ಳುತ್ತ, "ಆ ಕ್ರೂರರ ಕೈಯಿಂದ ಯಾವ ಪೆಟ್ಟೂ ಇಲ್ಲದೆ ಹೇಗೆ ತಪ್ಪಿಸಿಕೊಂಡು ಬಂದೆಯೋ ಪುಣ್ಯಾತ್ಮಾ ? ಏನೂ ಆಗಿಲ್ಲವಲ್ಲಪ್ಪಾ ನಿನಗೆ ?" ಎಂದು ಅವನ ಬೆನ್ನು ತಟ್ಟುತ್ತಾ ಕೇಳಿದನು.

"ಪರವಾಗಿಲ್ಲ. ನಮ್ಮ ಸಮೀರನು ಒಳ್ಳೇ ಧೈರ್ಯ ಸಾಹಸಿಯೇ ಸರಿ. ಈ ಚಿಕ್ಕಪ್ರಾಯದಲ್ಲೇ ಉಪಾಯ ಕೂಡಾ ಆಲೋಚಿಸುತ್ತಾನೆ ! ಅಂಥಾ ಕಳ್ಳರ ಕೈಯಿಂದ ತಪ್ಪಿಸಿಕೊಳ್ಳಬೇಕಾದರೆ ಎಷ್ಟು

"ಬುದ್ಧಿವಂತಿಕೆ ಬೇಕು! ಚೂಟೀ ಹುಡುಗ!" ಎಂದು ಇನ್ನೊಬ್ಬ ಗ್ರಾಮಸ್ಥನು ಬೆರಗು ನುಡಿಯಾಡಿದನು.

"ಹೌದೌದು" ಎಂದು ಅಲ್ಲಿದ್ದ ಇತರರೂ ತಲೆಯೊಲಿದರು.

ಆದರೆ ಸಮೀರನು ವಿನಯದಿಂದ ಎಲ್ಲರಿಗೂ ಕೈಮುಗಿದು, ಆಕಾಶದ ಕಡೆಗೆ ನಮಸ್ಕಾರ ಮಾಡುತ್ತ, "ಈ ದಿನ ನಾನು ಸಾವಿನ ಅಂಚಿನಿಂದ ತಪ್ಪಿಸಿಕೊಂಡೆನೆಂದರೆ ನನ್ನ ಧೈರ್ಯವೂ ಇಲ್ಲ. ಸಾಹಸವೂ ಇಲ್ಲ. ಬುದ್ಧಿವಂತಿಕೆಯೂ ಇಲ್ಲ. ಆ ಭಗವಂತನೇ ಒಬ್ಬ ದಿವ್ಯಪುರುಷನ ಮೂಲಕ ನನ್ನ ಪ್ರಾಣ ಕಾಪಾಡಿದನು. ಆದರೆ ನಾನೊಬ್ಬ ಬದುಕಿ ಏನು ಪ್ರಯೋಜನ? ಆ ದಾರಿದೋಚುವ ಕಳ್ಳರು ಹೀಗೆ ಇನ್ನೆಷ್ಟು ಮಂದಿಯನ್ನು ಬಲಿ ಕೊಡುವರೋ ಏನೋ! ಈ ಮೊದಲೂ ಅನೇಕರಿಗೆ ಕಾಟ ಕೊಟ್ಟಿದ್ದಾರೆ! ನಾನೊಬ್ಬ ಬದುಕಿಯೂ ಸಂತೋಷಪಡಲಾಗದೆ ಹೋಗಿದೆ" ಎಂದನು.

"ಅದೇನೋ ನಿಜವೇ. ಆದರೆ ನೀನೊಬ್ಬನಾದರೂ ಆ ದುಷ್ಟರ ಕೈಯಿಂದ ಬದುಕಿ ಬಂದದ್ದೊಂದು ವಿಶೇಷವೇ. ಪರಮ ಕ್ರೂರರಾದ ಆ ಕಳ್ಳರನ್ನು ತಡೆಯುವ ಶಕ್ತಿ ನಮಗಾರಿಗೂ ಇಲ್ಲ. ಮಹಾರಾಜರ ಶೂರ ಸೈನಿಕರಿಂದಲೂ ಅದು ಸಾಧ್ಯವಾಗುವ ಕೆಲಸವಲ್ಲವಪ್ಪಾ! ಆದ್ದರಿಂದಲೇ ಅವರ ಕರಾಮತಿ ನಡೆದುಕೊಂಡೇ ಇದೆ!" ಎಂದನು ಗ್ರಾಮಾಧಿಕಾರಿ ಚಿಂತಿಸುತ್ತ.

ಆಗ ಸಮೀರನು ಗಂಭೀರಭಾವದಲ್ಲಿ "ನನ್ನಿಂದೇನೋ ಕಾರ್ಯವಾಗಲಿದೆಯೆಂದು ಆ ದಿವ್ಯ ದೇವದೂತ ಪುಂಗವನು ಸೂಚಿಸಿದ್ದಾನೆ. ಈಗ ಆ ದುಷ್ಟ ಠೋಳಿಗಳ ಅಂತ್ಯಕಾಲ ಸಮೀಪಿಸಿದ ಹಾಗೆ ಕಾಣುತ್ತದೆ. ಎಂತಹ ದುಷ್ಟತನಕ್ಕಾದರೂ ಒಂದು ಅಂತ್ಯವಿದ್ದೇ ಇರುತ್ತದೆ. ಈಗ ಮಹಾರಾಜರ ಸೈನಿಕರೇ ಕಾರ್ಯರಂಗಕ್ಕೆ ಇಳಿಯಬೇಕು. ಅವರೀಗ ಇಲ್ಲಿಗೆ ಬಂದಿರುವುದೊಂದು ಸುದೈವ. ಅವರು ನನ್ನ ಹಿಂದೆ ಬಂದರೆ ನಾನೇ ಆ ಎಲ್ಲಾ ಕಳ್ಳರನ್ನೂ ಹಿಡಿಸಿಕೊಡುತ್ತೇನೆ. ನಾಳೆಯವರೆಗೆ ತಡಮಾಡಿದರೆ ಮಾತ್ರ ಸಾಧ್ಯವಾಗದು" ಎಂದನು.

ಅವನ ಮಾತು ಕೇಳಿ ಎಲ್ಲರಿಗೂ ದಂಗು ಬಡೆಯಿತು. ಅಲ್ಲಿಯೇ ಇದ್ದ ಸೈನಿಕ ದಳನಾಯಕನು ಆ ಹುಡುಗನಿಗೆ ಬುದ್ಧಿಭ್ರಮಣವಾಗಿರುವಂತೆ ಅನುಮಾನವಾಗಿ ಅವನನ್ನೇ ಮೇಲಿಂದ ಕೆಳಗಿನವರೆಗೂ ನೋಡತೊಡಗಿದನು. ಆದರೆ ಗ್ರಾಮಾಧಿಕಾರಿ ಸಮೀರನ ಮೇಲೆ ನಂಬುಗೆಯುಳ್ಳವನಾದುದರಿಂದ, ಅವನು ಆಪ್ಯಾಯತೆಯಿಂದ ಸಮೀರನನ್ನು ಕೈಹಿಡಿದು ಹತ್ತಿರ ಕರೆದು, "ಈ ಕಳ್ಳರಿರುವ ದಿಕ್ಕು ಜಾಗೆ ನಿನಗೆ ಸರಿಯಾಗಿ ಗೊತ್ತಿದೆಯೇ? ಒಂದುವೇಳೆ ನೀನು ನಮ್ಮನೆಲ್ಲ ಕರೆದುಕೊಂಡು ಹೋದರೂ ಅವರು ಅಲ್ಲಿಂದ ಬೇರೆ ಕಡೆಗೆ ತಪ್ಪಿಸಿಕೊಂಡು ಹೋಗಲು ಸಾಧ್ಯವಿದೆಯಷ್ಟೆ?" ಎಂದನು.



ಆಗ ದಳನಾಯಕನು, "ಒಂದುವೇಳೆ ಆ ಕಳ್ಳರು ಅಲ್ಲಿಯೇ ಇದ್ದರೂ ಕೆಲವೇ ಮಂದಿ ಸೈನಿಕರು ಮಾತ್ರವೇ ಈಗ ಇದ್ದಾರೆ. ಅಸಂಖ್ಯಾಕರಾದ ಆ ಕ್ರೂರರನ್ನು ಹೇಗೆ ಹಿಡಿಯಲು ಸಾಧ್ಯವಾದೀತು ?" ಎಂದು ಗ್ರಾಮಾಧಿಕಾರಿಯನ್ನು ನೋಡಿ, "ಸಣ್ಣ ಹುಡುಗನ ಮಾತು ಕೇಳಿ ನಾವು ಹೋಗುವ ಕೆಲಸ ಬಿಟ್ಟು ಅಪಾಯಕ್ಕೆ ಸಿಕ್ಕಿದರೆ ಮಹಾರಾಜರು ಸುಮ್ಮನೆ ಬಿಡಲಾರರು !" ಎಂದು ಅನುಮಾನ್ನದಿಂದ ಕೇಳಿದನು.

"ಆ ದುಷ್ಟರಷ್ಟೂ ಮಂದಿ ಗುಹೆಯ ಮುಖದ ಹತ್ತಿರವೇ ಎಚ್ಚರ ತಪ್ಪಿ ಬಿದ್ದಿದ್ದಾರೆ. ನಾವು ಹೋಗುವವರೆಗೂ ಅವರೇನೂ ಏಳುವುದಿಲ್ಲ. ಇದಕ್ಕೆಲ್ಲಾ ಕಾರಣ ನನ್ನನ್ನು ಕಾಪಾಡಿದವನೇ !" ಎಂದನು ಸಮೀರ.

"ಹಾಗೇನು ?" ಎಂದನು ದಳನಾಯಕ. ಅವನ ಮುಖದಲ್ಲಿ ಹೊಸ ಬೆಳಕು ಹೊಳೆಯಿತು. ಅವನು ತನ್ನ ಸೈನಿಕರನ್ನು ಕರೆದು ತನ್ನೊಂದಿಗೆ ಹೊರಡಲು ತಯಾರಾಗುವಂತೆ ಹೇಳಿದನು.

"ಕಂದಾ, ಸಮೀರಾ ! ರಾತ್ರಿ ಪೂರಾ ಏನೂ ತಿನ್ನದೆ ಹಸಿವೆಯಿಂದ ಕಂದಿಹೋಗಿರುವಿ, ಮತ್ತೆ ಯಾವಾಗ ಬರುವಿಯೋ ಏನೋ ? ಒಂದಿಷ್ಟು ತಿಂದು ಹೋಗಪ್ಪಾ" ಎಂದಳು ಸಮೀರನ ತಾಯಿ.

"ಬೇಡಮ್ಮಾ ! ಅಂದುಕೊಂಡ ಕೆಲಸ ಪೂರ್ತಿ ಮುಗಿಸಿ ಬಂದು ತೃಪ್ತಿಯಾಗಿ ತಿನ್ನುತ್ತೇನೆ. ತಡ ಮಾಡಿದರೆ ಕೈಗೆ ಬಂದ ಸದವಕಾಶ ಜಾರಿಹೋಗಬಹುದು. ನಾನು ಬರುವಾಗಲೇ ಇಲ್ಲಿಗೆ ಮಹಾರಾಜರ ಸೈನಿಕರು ಬರುವುದು ಒಳ್ಳೆಯ ಅವಕಾಶವಲ್ಲವೇನಮ್ಮಾ ?" ಎಂದನು ಸಮೀರ ಉತ್ಸಾಹದಿಂದ ಹೊರಟು.

ಸಮೀರನ ಹಿಂದೆ ದಳನಾಯಕನೂ, ಅವನ ಹಿಂದೆ ಆಯುಧಧಾರಿಗಳಾದ ಭಟರೂ ಹೊರಟರು. ಆದರಿಂದ ಕುತೂಹಲವೂ ಉತ್ಸಾಹವೂ ತುಂಬಿ ಬರಲು, ಅವರನ್ನನುಸರಿಸಿ, ಗ್ರಾಮದೊಳಗಿನ ಧೈರ್ಯಶಾಲಿಗಳಾದ ದೃಢಕಾಯರಾದ ಕೆಲಮಂದಿ ಗ್ರಾಮಸ್ಥರೂ ಹೊರಟರು. ಗ್ರಾಮಸ್ಥರ ಕೈಯಲ್ಲಿ ಕೂಡಾ ಕತ್ತಿ, ಕೋಲು, ಬಿಲ್ಲುಬಾಣಗಳೂ ಇದ್ದುವು.

ಅವರೆಲ್ಲರೂ ಬಹಳ ಉತ್ಸಾಹದಿಂದ, ಜಾಗರೂಕತೆಯಿಂದ ಬಹಳ ದೂರದವರೆಗೆ ನಡೆದು ಅಡವಿ ಪ್ರಾಂತ್ಯವನ್ನು ಸಮೀಪಿಸಿದರು.

ಕಳ್ಳರ ನಿವಾಸವು ಕಣ್ಣಳತೆಯ ದೂರದಲ್ಲಿರುವಾಗ, ಸಮೀರನು ಜತೆಯಲ್ಲಿ ಬಂದ ಎಲ್ಲರನ್ನೂ ಒಂದು ಕಡೆಯಲ್ಲಿ ಇರುವಂತೆ ಹೇಳಿ, ತಾನೊಬ್ಬನೇ ಇದಿರಿನಲ್ಲಿ ಕಾಣುವ ಚಿಕ್ಕದೊಂದು ಗುಡ್ಡದ ಮೇಲೆ ಹತ್ತಿನಿಂತು ಆಚೆಯ ಕಡೆಗೆ ನೋಡಿದನು. ಕಳ್ಳರೆಲ್ಲರೂ ಇನ್ನೂ ಮೈ ತಿಳಿಯದ ನಿದ್ದೆಯ ಮಂಪರಿನಲ್ಲಿ ಬಿದ್ದಿರುವುದು ಗುಹಾಮುಖದ ಹೊರಭಾಗದಲ್ಲಿ ಅಲ್ಲಲ್ಲಿಯೇ ಕಂಡಿತು.



ಸಮೀರನು ಮುಗುಳು ನಗುತ್ತ ಬಹಳ ಸಂತೋಷದಿಂದ ಕೈಕುಣಿಸಿ, ದಳನಾಯಕನಿಗೂ, ಗ್ರಾಮಾಧಿಕಾರಿಗೂ ಬೇಗನೆ ಮೇಲೆ ಬರುವಂತೆ ಸನ್ನೆ ಮಾಡಿ ತೋರಿಸಿದನು.

ಅವರಿಬ್ಬರೊಂದಿಗೆ ಉಳಿದವರೂ ಸಹ ಗಬಗಬನೆ ಮೇಲೆ ಹತ್ತಿ ಗುಹೆಗಳಿರುವ ಆಚೆಯ ಬದಿಗೆ ಇಳಿದರು. ದಳನಾಯಕನ ಆಜ್ಞಾನುಸಾರವಾಗಿ ಸೈನಿಕರು ಮರಗಳಿಗೆ ಬಳಸಿಕೊಂಡಿದ್ದ ಬಲವಾದ ಬಳ್ಳಿಗಳನ್ನು ಕತ್ತಿಗಳಿಂದ ಕಡಿದು ತಂದು ನಿದ್ರೆಯಲ್ಲಿದ್ದ ಕಳ್ಳರೆಲ್ಲರ ಕೈಗಳನ್ನೂ ಹಿಂದಕ್ಕೆ ಬಿಗಿದು ಎದೆಗೆ ಸೇರಿಸಿ ಅಲುಗಲಾಗದಷ್ಟು ಬಿಗಿಯಾಗಿ ಕಟ್ಟಿದರು.

ಮೊದಲು ಮತ್ತಿಳಿದು ಕಣ್ಣು ತೆರೆದವನು ಭೈರವಮಲ್ಲನೇ. ತನ್ನ ಇದಿರಲ್ಲಿ ಕತ್ತಿ ಝಳಿಪಿಸಿಕೊಂಡು ನಿಂತಿರುವ ದಳನಾಯಕನನ್ನು ನೋಡಿ ಭೀತಿಯಿಂದ ತತ್ತರಿಸತೊಡಗಿದನು. ತಾನೆಲ್ಲಿರುವೆನೆಂದೇ ತಿಳಿಯದೆ ಅವನ ಕಣ್ಣುಗುಡ್ಡುಗಳು ಉರುಳುತ್ತಿದ್ದುವು.

"ದುಷ್ಟಾ! ಕ್ರೂರಾ! ಕಟುಕಾ! ಈ ಕ್ಷಣದಿಂದ ನಿನ್ನ ಆಟ ಕಟ್ಟು! ಒಳ್ಳೇ ಮಾತಿನಲ್ಲಿ ನಮ್ಮ ಹಿಂದೆ ನಡೆದು ಬರುತ್ತಿಯಾ ಸರಿ. ತಪ್ಪಿಸಿಕೊಳ್ಳಲು ನೋಡಿದಿಯಾ? ಮುಳ್ಳು ಕಲ್ಲು ಕುಂಟೆಗಳೆಂದು ನೋಡದೆ ದರದರ ಎಳೆದು ಎಲುಬು ಮಾತ್ರ ಉಳಿಯುವ ಹಾಗೆ ಮಾಡುತ್ತೇವೆ, ಮಹಾರಾಜರಿಗೆ ನಿನ್ನ ತಲೆ ಮಾತ್ರ ಕೊಡುತ್ತೇವೆ. ಜಾಗ್ರತೆ! ಕ್ಷಮೇ ಕೇಳುವವರೆಗಾದರೂ ಬದುಕಬೇಕೆಂದಿದ್ದರೆ ಸುಮ್ಮನೆ ಬಾ..." ಎಂದನು ದಳನಾಯಕ.

ಭೈರವಮಲ್ಲನು ಒಂದು ಕ್ಷಣ ಸುತ್ತುಮುತ್ತಲೂ ಕಣ್ಣಾಡಿಸಿ ನೋಡಿ, ಕೈಗೂ ಎದೆಗೂ ಸೇರಿಸಿ ಕಟ್ಟಿದ ಬಳ್ಳಿಯನ್ನು ಹಲ್ಲಿನಿಂದ ಕಚ್ಚಲು ಹವಣಿಸಿದನು. ಆ ಕ್ಷಣದಲ್ಲಿ ದಳನಾಯಕ ಮುಷ್ಟಿಬಿಗಿದು ಅವನ ಬಾಯಿಯ ಮೇಲೆ ಗಟ್ಟಿಯಾಗಿ ಗುದ್ದಿ, "ಇನ್ನೊಂದು ಗುದ್ದಿಗೆ ಹಲ್ಲುಗಳೆಲ್ಲಾ ಉದುರಿ ಹೋದೀತು! ಜೀವದ ಮೇಲೆ ಆಶೆ ಇದ್ದರೆ ನಾನು ಹೇಳಿದ ಹಾಗೆ ಮಾಡು; ನಡಿ" ಎಂದನು.

ದಳನಾಯಕನ ದೃಢವಾದ ಕಂಠಸ್ವರವು ಗುಡ್ಡಗಳಲ್ಲಿ ಮಾರ್ಮೊಳಗಿತು. ಅಷ್ಟರೊಳಗೆ ಭೈರವಮಲ್ಲನ ಗುಂಪಿನ ಕಳ್ಳರು ಒಬ್ಬೊಬ್ಬರಾಗಿ ಎಚ್ಚರಕ್ಕೆ ಬಂದು ತಮ್ಮನ್ನು ಬಿಗಿದುಕೊಂಡ ದುಸ್ಥಿತಿಯನ್ನು ಅರಿತುಕೊಂಡರು. ಸೈನಿಕರ ಗುಂಡು ಕೊರಡೆಗಳ ಬೀಸುವಿಕೆ ನೋಡಿದ ಕೂಡಲೇ ಯಾವ ಕಳ್ಳ ಬಂಟನಿಗೂ ಕಿಂಕಂ ಅನ್ನುವ ಧೈರ್ಯ ಬರಲಿಲ್ಲ. ಸೈನಿಕರ ಹಿಂದೆಯೇ ನಡೆಯಲು, ಅವರ ಬೆದರುಗಣ್ಣುಗಳು ಸುತ್ತುಮುತ್ತಲೂ ನೋಡುತ್ತಿದ್ದುವು. ಒಬ್ಬೊಬ್ಬನ ಕಳ್ಳನ ಹಿಂದೂ ಮುಂದೂ ಆಯುಧಧಾರಿಗಳು! ಸಮೀರನೂ ಗ್ರಾಮಾಧಿಕಾರಿಯೂ ಎಲ್ಲರಿಗಿಂತ ಮುಂದೆ ಸಾಗುತ್ತಿದ್ದರು.

ಹೀಗೆ ಎಲ್ಲರೂ ಸಮೀರನ ಗ್ರಾಮವನ್ನು ತಲಪಿದಾಗ ಸುತ್ತುಮುತ್ತಲಿನ ಗ್ರಾಮಗಳಿಂದ ಅಲ್ಲಿಗೆ

ಬಂದು ಗುಂಪುಗೂಡಿದ ನೂರಾರು ಮಂದಿ ಜನರು ಕಳ್ಳರನ್ನು ವಿಚಿತ್ರ ಕುತೂಹಲದಿಂದ ನೋಡ ತೊಡಗಿದರು. ಕಳ್ಳರೆಲ್ಲರೂ ತಲೆ ತಗ್ಗಿಸಿಕೊಂಡು ನಿಂತಿದ್ದರು. ಈ ಕಳ್ಳರಿಂದ ತಾವು ಅನುಭವಿಸಿದ ಸಂಕಟವನ್ನು ನೆನೆದು ಕೆಲವರು ರೋಷ ತಾಳಲಾಗದೆ ತಾವು ಗುರುತಿಸಿದ ಕಳ್ಳರಿಗೆ ಹೊಡೆಯಲು ಬಂದರು. ಆಗ ಸಮೀರನು ಅವರನ್ನು ತಡೆದು, "ನಿಲ್ಲಿರಿ ! ನಿಲ್ಲಿರಿ ! ಕಳ್ಳರೆಲ್ಲಾ ಸಿಕ್ಕಿಬಿದ್ದರಲ್ಲವೆ ? ಮಹಾರಾಜರು ಅವರನ್ನು ತಕ್ಕ ಹಾಗೆ ಶಿಕ್ಷಿಸುತ್ತಾರೆ. ನೀವೆಲ್ಲಾ ಸದ್ಯ ಸಹನೆಯಲ್ಲಿದ್ದು, ಈ ಕಳ್ಳರಿಂದಾದ ಬಾಧೆ ಯನ್ನು ಮಹಾರಾಜರೊಂದಿಗೆ ಹೇಳಿರಿ. ದೊಡ್ಡವ ರಾದ ನಿಮಗೆ ಹೆಚ್ಚಿಗೆ ನಾನೇನು ಹೇಳಲಿ ?" ಎಂದು ಹೇಳಿದನು.

ಗ್ರಾಮಸ್ಥರೆಲ್ಲರೂ ಸಮೀರನಿಗೆ ಜಯಜಯಾಕಾರ ಮಾಡಿದರು. ಕೆಲವರು ಅವನನ್ನು ಹೆಗಲಲ್ಲಿ ಹೊತ್ತು ಕೊಂಡು ಉತ್ಸಾಹದಿಂಧ ಕುಣಿದರು.

ಗ್ರಾಮಾಧಿಕಾರಿ ಸಮೀರನಿಗೂ, ದಳನಾಯಕನೇ ಮೊದಲಾದ ಸೈನಿಕರಿಗೂ ಔತಣದ ಅಡಿಗೆ ಮಾಡಿಸಿದನು.

ಊಟವಾದ ಅನಂತರ ಎಲ್ಲರೂ ಅತ್ತಿತ್ತ ತಿರುಗಾಡುತ್ತಿದ್ದಾಗ, ನೆರಳಿಗಾಗಿ ಒಂದು ಮರದ ಬುಡದಲ್ಲಿ ನಿಂತಿದ್ದ ಸಮೀರನಿಗೆ ಸಣ್ಣಗಿನ ಸಿಳ್ಳಿನ ಧ್ವನಿ ಕೇಳಿಸಿತು. ಸಮೀರನು ಸಿಳ್ಳಿನ ಧ್ವನಿ ಬಂದ ಕಡೆಗೆ ತಿರುಗಿ ನೋಡಿದನು. ಅತ್ತಕಡೆ ಒಂದು ಪೊದರಿನ ಮರೆಯಲ್ಲಿ ಅಪೂರ್ವನು ಕಾಣಿಸಿದನು.

ಅತ್ಯಾನಂದದಿಂದ ಸಮೀರನು ಅವನ ಬಳಿಗೆ ಓಡಿ ಅಪೂರ್ವನ ಸೈಗೆಯಿಂದ ಮುಂದೆ ಹೋಗದೆ ಅರ್ಧ ದಲ್ಲೇ ನಿಂತನು. ಅಪೂರ್ವನಿಗೆ ತಾನು ಅಲ್ಲಿರುವ ಸಂಗತಿ ಇನ್ನೊಬ್ಬರಿಗೆ ತಿಳಿಯಬಾರದೆಂಬುದು ಸಮೀರನಿಗೆ ಅರ್ಥವಾಯಿತು. ಆದ್ದರಿಂದ ಅವನು ಯಾರಿಗೂ ಅನುಮಾನ ಬಾರದಂತೆ ತಿರುಗಾಡಲು



ಹೋಗುವವನಂತೆ ಪೊದರಿನಾಚೆಗೆ ಹೋದನು. "ಅಯ್ಯಾ, ನಿಮ್ಮನ್ನು ನೋಡಿ ನನಗಾದ ಸಂತೋಷ ಬಾಯಿಯಿಂದ ಹೇಳಲಾಗದಷ್ಟು" ಎಂದನು ಅಪೂರ್ವನೊಂದಿಗೆ ಪಿಸುದನಿಯಿಂದ.

"ಪ್ರಿಯ ಸಮೀರಾ, ಆ ಕಳ್ಳರನ್ನೆಲ್ಲಾ ಬಂಧಿಸುವು ದಕ್ಕೆ ನೀನು ತೋರಿಸಿದ ಜಾಣತನ ನೋಡಿ ನನಗೂ ಬಹಳ ಸಂತೋಷವಾಯಿತು. ಎಷ್ಟೇ ದುಷ್ಟರಾದರೂ ಆ ಕಳ್ಳರು ಕೂಡಾ ಮನುಷ್ಯರು ತಾನೇ ? ಅವರಿಗೂ ತಿಂಡಿತೀರ್ಥ ಕೊಡಲು ಗ್ರಾಮಾಧಿಕಾರಿಗೆ ಹೇಳಪ್ಪಾ. ಅದಕ್ಕೇ ಕರೆದ" ಎಂದನು ಅಪೂರ್ವ.

"ಹಾಗೆಯೇ ಹೇಳುತ್ತೇನೆ ದೇವಾ !" ಎಂದನು ಸಮೀರ.

"ಸಮೀರಾ, ನನ್ನನ್ನು ಮಿತ್ರಾ ಎಂದು ಕರೆ. ಅದೇ ಸಾಕು" ಎಂದನು ಅಪೂರ್ವ ನಗುತ್ತ.

* * *



ದಳನಾಯಕನು ದಾರಿದೋಚುವ ಕಳ್ಳರನ್ನೆಲ್ಲಾ ಬಂಧಿಸಿ, ರಾಜಧಾನಿಗೆ ಒಯ್ದು ಅವರನ್ನೆಲ್ಲಾ ಮಹಾರಾಜನ ಮುಂದೆ ನಿಲ್ಲಿಸಿದನು. ಕೆಲವು ಕಳ್ಳರ ಗುರುತಿಟ್ಟುಕೊಂಡಿದ್ದ ಗ್ರಾಮಸ್ಥರು ತಮ್ಮ ದೂರುಗಳನ್ನು ಹೇಳಿಕೊಂಡರು. ರಾಜನು ಎಲ್ಲಾ ಕಳ್ಳರಿಗೂ ಮರಣದಂಡನೆ ವಿಧಿಸಿದನು. ಎಲ್ಲಾ ಕಳ್ಳರ ಕೈಕಾಲುಗಳನ್ನು ಸಂಕಲೆಗಳಿಂದ ಬಂಧಿಸಿ ಒಬ್ಬರೊಡನೆ ಇನ್ನೊಬ್ಬರನ್ನು ಸೇರಿಸಿಯೇ ಬಿಗಿಯಲ್ಪಟ್ಟಿತ್ತು. ಮರಣಶಿಕ್ಷೆ ನೆರವೇರುವವರೆಗೂ ಆ ಕಳ್ಳರ ಪ್ರಾಣಗಳು ಹೋಗದಂತಿರಲು ಸ್ವಲ್ಪ ಮಾತ್ರ ತಿಂಡಿ ಕೊಡುತ್ತಿದ್ದರು. ಹೀಗೆ ಕಾರಾಗಾರದೊಳಗೆ ಸೇರಿದ ಆ ಕಳ್ಳರು ದೊಡ್ಡ ದಿಗಿಲಿನಿಂದ ತಲೆ ತಗ್ಗಿಸಿಕೊಂಡು ಭೈರವಮಲ್ಲನನ್ನು ಸುಡುಗಣ್ಣುಗಳಿಂದ ನೋಡುತ್ತಿದ್ದರು. ಅಂಥವರಲ್ಲೊಬ್ಬ ಕಳ್ಳ, "ಲೋ! ಭೈರವಾ! ನಿನ್ನಿಂದಾಗಿಯೇ ನಮಗೆಲ್ಲ ಈ ಗತಿ!" ಎಂದು ರೋಷಕಾರಿದನು.

"ಏನೋ! ನನ್ನ ಹೆಸರು ಹೇಳಿ ಬೈಯುವಿಯಾ! ಅಷ್ಟು ಧೈರ್ಯ ಬಂತೇನೋ! ನಿನ್ನ ಗುಂಡಿಗೆ ಗುದ್ದಿ ಪುಡಿಮಾಡೇನು!" ಎಂದನು ಆವೇಶದಿಂದ.

"ಬಾಯಿಮುಚ್ಚಿ ಬಿದ್ದಿರೋ ಬರಿ ಬುಸ್ಸಪ್ಪಾ!" ಎಂದನು ಆ ಕಳ್ಳ.

"ಏಯ್! ನಾನು ನಿಮಗೆಲ್ಲಾ ನಾಯಕ! ಕರೆದ ಕೂಡಲೇ ದೊರೇ ಎಂದು ನನ್ನ ಕಾಲಿಗೆ ಬೀಳುವ ನೀನು ಈಗ ಅದನ್ನೆಲ್ಲಾ ಮರೆತು ಕೊಬ್ಬು ತೋರಿಸುವಿಯಾ? ಜಾಗ್ರತೆ!" ಎಂದು ಹೆದರಿಸಿದನು ಭೈರವಮಲ್ಲ.

"ಸುಮ್ಮನೆ ಗಳಹಬೇಡ್ವೋ. ನಿನ್ನಿಂದಾಗಿ ನೀನೂ ಸೇರಿ ನಮ್ಮೆಲ್ಲರ ಪ್ರಾಣಗಳೂ ಹೋಗುವಂತಾದ್ದು ನೆನಪಿಲ್ಲದೆ ಅಧಿಕಾರ ತೋರಿಸುವಿಯಾ? ನಿನಗೆ ಗೌರವವೆ? ಗೌರವಿಸಿದ್ದರ ಫಲ ಏನಾಯಿತು?" ಎಂದನು ಆ ಕಳ್ಳ ನಿರ್ಭಯದಿಂದ.

"ಮುಚ್ಚು ಬಾಯ್! ಪ್ರಾಣ ತೆಗೆದೇನು!" ಎಂದು ಭೈರವಮಲ್ಲನು ಹೇಳಲು, "ನಿನಗೆ ಆ ಕಷ್ಟವೇ ಇಲ್ಲದ ಹಾಗೆ ಆ ಕೆಲಸ ರಾಜಭಟರೇ ಮಾಡುತ್ತಾರೆ!" ಎಂದನು ಕಳ್ಳ.

ಭೈರವಮಲ್ಲನು ತಾಳಲಾಗದ ಕೋಪದಿಂದ ಕರಕರನೆ ಹಲ್ಲು ಕಡಿದುಕೊಂಡನು. ಎಲ್ಲಾ ಕಳ್ಳರೂ ಮೌನವಾಗಿದ್ದರು. ಅವರೆಲ್ಲರೂ ಭೈರವಮಲ್ಲನ ಮೇಲೆ ತಿರುಗಿ ಬೀಳುವವರೆಂದೇ ಆಯಿತು.

"ನಿಮಗೆಲ್ಲಾ ಬರಲಿರುವ ಮರಣದಂಡನೆಯಿಂದ ತಪ್ಪಿಸಿಕೊಳ್ಳಬೇಕೆಂದಿದೆಯೆ?" ಎಂದು ಮಧುರ ಕಂಠಸ್ವರವೊಂದು ಒಂದು ಮೂಲೆಯಿಂದ ಹೊರಟು ಬಂತು.

ಕಳ್ಳರೆಲ್ಲರೂ ಆ ಕಂಠಸ್ವರ ಹೊರಡುವ ಕಡೆಗೆ ತಿರುಗಿ ನೋಡಿದರು. ಕತ್ತಲೆಯಾಗಿದ್ದ ಆ ಮೂಲೆಯನ್ನು ನೋಡುತ್ತಾ ಭೈರವಮಲ್ಲನು "ಯಾರು ಈ ಪ್ರಶ್ನೆ ಕೇಳಿದ್ದು?" ಎಂದು ಕೇಳಿದನು.

"ನೀವೆಲ್ಲಾ ಸಿಕ್ಕಿಬೀಳಲು ಕಾರಣನಾದವನು!" ಎಂದಿತು ಅದೇ ಕಂಠಸ್ವರ.

"ನಾವೆಲ್ಲಾ ಹೀಗೆ ಸಿಕ್ಕಿಬೀಳಲು ಕಾರಣನಾದವನಾದರೆ ಈಗ ಏಕೆ ನಮ್ಮನ್ನು ಕಾಪಾಡಲು ನೋಡುತ್ತೀ?" ಎಂದು ಕೇಳಿದನು ಭೈರವಮಲ್ಲ.

"ನಿಜವಾದ ಅಪರಾಧಿಗಳು ಸಾಯುವುದು ನನಗೆ ಇಷ್ಟವಿಲ್ಲ. ಅವರಲ್ಲಿ ಒಳ್ಳೆಯ ಬದಲಾವಣೆ ಬಂದರೆ ನೋಡಿ ಸಂತೋಷಪಡುತ್ತೇನೆ. ಪಾಪಕೃತ್ಯಗಳಿಂದ ಜೀವನ ಸಾಗಿಸುತ್ತ ನಿಮ್ಮಂಥ ಇನ್ನೊಬ್ಬ ಮನುಷ್ಯರಿಗೆ ದುಃಖವನ್ನುಂಟುಮಾಡುತ್ತ ನಿಮ್ಮನ್ನು ನೀವೇ ನಾಶಪಡಿಸಿಕೊಳ್ಳುವಿರಿ. ಅಂಥಾ ಜೀವನವು ನಿರರ್ಥಕವಾದ್ದರಿಂದ ನಿಮ್ಮನ್ನು ಮಹಾರಾಜರ ಸೈನಿಕರಿಗೆ ಹಿಡಿಸಿಕೊಟ್ಟೆನು. ಇನ್ನು ಮೇಲೆ ಒಳ್ಳೇ ಮಾರ್ಗದಲ್ಲಿ ನಡೆಯುತ್ತೇವೆಂದು ಮಾತು ಕೊಟ್ಟರೆ, ಮಹಾರಾಜರೊಂದಿಗೆ ನಿಮ್ಮ ಮೊರೆಯನ್ನು ಹೇಳಿ ನಿಮಗೆ ಕ್ಷಮಾಭಿಕ್ಷೆ ಕೊಡಿಸುತ್ತೇನೆ" ಎಂದು ಹೇಳಿದವನು ಅಪೂರ್ವನೇ! ಆದರೆ ಅವರೆಲ್ಲರಿಗೂ ಕತ್ತಲೆಯೇ ಮಾತಾಡುವಂತಿತ್ತೇ ಹೊರತು ಅವನ ರೂಪ ಮಾತ್ರ ಕಾಣಲಿಲ್ಲ.



ಕಳ್ಳರು ಸ್ವಲ್ಪಹೊತ್ತು ಮೌನವಾಗಿದ್ದು, ಆಮೇಲೆ ಎಲ್ಲರೂ ಒಕ್ಕೊರಲಿನಿಂದ "ಓ! ಮರೆಯಲ್ಲಿರುವ ಮಹಾತ್ಮಾ! ನಮ್ಮನ್ನೆಲ್ಲಾ ಗಲ್ಲಿನ ಶಿಕ್ಷೆಯಿಂದ ರಕ್ಷಿಸು. ಈ ಕ್ಷಣದಿಂದ ಒಳ್ಳೆಯ ಮಾರ್ಗದಲ್ಲಿ ನಿನ್ನ ಆಜ್ಞೆಯಂತೆಯೇ ನಡೆಯುತ್ತೇವೆ" ಎಂದರು.

"ಭೈರವಮಲ್ಲನ ಅಭಿಪ್ರಾಯವೇನು?" ಎಂದು ಕೇಳಿದನು ಅಪೂರ್ವ.

ಭೈರವಮಲ್ಲನು ದೀರ್ಘವಾದ ನಿಟ್ಟುಸಿರುಬಿಟ್ಟು, "ನಾನೂ ಒಂದು ಕಾಲದಲ್ಲಿ ಸಂತೋಷಕರವಾದ ಒಳ್ಳೆಯ ಮಾರ್ಗದಲ್ಲೇ ಜೀವನ ಸಾಗಿಸಬೇಕೆಂದಿದ್ದೆನು. ಆದರೆ ಸುಲಭೋಪಾಯದ ಚಪಲದಲ್ಲಿ ಪರಪೀಡನೆಯ ಪಾಪ ಜೀವನ ಕ್ರಮಕ್ಕೆ ಅಭ್ಯಾಸವಾಗಿ ಹೋದೆನು. ಜತೆಗಾರರಿಗೂ ಅಂಥಾ ಆಶೆ ತೋರಿಸಿ ಕೆಡಿಸಿದನು. ಈಗ ನೀನು ಕಾಪಾಡುವಿಯಾದರೆ ಸಾಯುವವರೆಗೂ ನಿನ್ನ ಸೇವೆಯಲ್ಲೇ ಕಾಲ ಕಳೆಯುತ್ತೇವೆ" ಎಂದನು.

"ನನ್ನ ಸೇವೆಯಲ್ಲ, ಆತ್ಮಸೇವೆ ಅನ್ನು. ಅಂದರೆ ಧರ್ಮಮಾರ್ಗ. ಅಂಥವರಿಗೆ ಸೋಲೂ ಇಲ್ಲ, ಅಶಾಂತಿಯೂ ಇಲ್ಲ" ಎಂದನು ಅಪೂರ್ವ.

"ನನಗೆ ಏನಾದರೂ ಚಿಂತೆಯಿಲ್ಲ. ಮಹಾರಾಜರು ನನ್ನ ಈ ಜತೆಗಾರರೆಲ್ಲರನ್ನೂ ಕ್ಷಮಿಸಿ ಬಿಡುಗಡೆ ಮಾಡಿ, ನನ್ನನ್ನು ಮಾತ್ರ ಗಲ್ಲುಗಂಬಕ್ಕೇರಿಸಲಿ! ಸಂತೋಷಿಸುತ್ತೇನೆ" ಎಂದನು ಭೈರವಮಲ್ಲ.

"ನಿನ್ನಲ್ಲಿ ನಿಜವಾಗಿಯೂ ಒಳ್ಳೆಯ ಬದಲಾವಣೆ ಬಂದುದಕ್ಕೆ ನಿನ್ನ ಮಾತುಗಳೇ ನಿದರ್ಶನ. ನಿಮ್ಮ ಸಂಗತಿ ಮಹಾರಾಜರಿಗೆ ತಿಳಿಯಪಡಿಸುತ್ತೇನೆ. ಅಷ್ಟರವರೆಗೆ ನೀವು ನಿಮ್ಮ ನಿಮ್ಮ ಇಷ್ಟ ದೈವವನ್ನು ಸ್ಮರಿಸಿ ಭಗವತ್ಪ್ರಾರ್ಥನೆ ಮಾಡಿಕೊಂಡಿರಿ. ನಿರ್ಧಾರ

ಸಡಿಲದಿದ್ದರೆ ಆ ಭಗವಂತನೇ ನಿಮ್ಮನ್ನು ರಕ್ಷಿಸುತ್ತಾನೆ!" ಎಂದು ಹೇಳಿದನು ಅಪೂರ್ವ.

• • •

ಒಳ್ಳೆಯ ಮಾರ್ಗದಲ್ಲಿ ನಡೆಯುವುದಾಗಿ ಮಾತು ಕೊಟ್ಟ ಆ ಕಳ್ಳರ ಗುಂಪನ್ನೆಲ್ಲಾ ಕ್ಷಮಿಸಿ ಬಿಟ್ಟುಬಿಡಬೇಕೆಂದು, ತನ್ನ ಮೂಲಕ ತನ್ನನ್ನು ಕಾಪಾಡಿದ ದೇವಸೇವಕನು ಹೇಳಿಸುತ್ತಿದ್ದಾನೆಂದು ಸಮೀರನು ಮಹಾರಾಜನೊಂದಿಗೆ ಹೇಳಿದನು. ರಾಜನು ಅದಕ್ಕೆ ಅಂಗೀಕರಿಸದೆ, "ಆ ದುಷ್ಟರು ಕ್ರೂರ ಪ್ರಾಣಿಗಳಿಗಿಂತಲೂ ಘೋರರು! ಯಾವ ಪಾಪವನ್ನೂ ಅರಿಯದ ಅಸಂಖ್ಯಾಕ ಜನರನ್ನು ಕೊಂದಿದ್ದಾರೆ. ಅಂಥಾ ನರರೂಪೀ ರಾಕ್ಷಸರಿಗೆ ಮರಣ ಶಿಕ್ಷೆಗಿಂತ ಹೆಚ್ಚಿನ ಶಿಕ್ಷೆ ನ್ಯಾಯಕೋಶದಲ್ಲಿಲ್ಲ" ಎಂದನು.

"ಮಹಾಪ್ರಭೂ, ಪರಮಾತ್ಮನೇ ಅವರನ್ನು ಕ್ಷಮಿಸಿದ್ದಾನೆಂದು ನಾನು ಭಾವಿಸುತ್ತೇನೆ" ಎಂದನು ಸಮೀರ.

"ಏನಿದು ಹುಡುಗಾ! ಪರಮಾತ್ಮನ ಪ್ರತಿನಿಧಿ ಅಂದುಕೊಂಡು ಹೀಗೆ ಹೇಳಬಾರದು. ನಿನಗೆ ಅನುಭವವಿಲ್ಲ. ಸುಮ್ಮನಿರು "ಎಂದನು ನಗುತ್ತ ರಾಜ.

"ನಾನು ಭಗವಂತನ ಪ್ರತಿನಿಧಿಯಲ್ಲ ಪ್ರಭೂ. ನನ್ನನ್ನು ಕಾಪಾಡಿದ ದಿವ್ಯ ಪುರುಷನೇ ನನ್ನಿಂದ ಹೀಗೆ ಹೇಳಿಸುತ್ತಿದ್ದಾನೆ" ಎಂದನು ಸಮೀರ.

"ಶಾಭಾಸ್! ಆ ದಿವ್ಯ ದೇವನೇ ಇವರನ್ನೆಲ್ಲಾ ರಕ್ಷಿಸಬೇಕೆಂದಿರುವಾಗ, ಏನಾದರೊಂದು ಅದ್ಭುತ ತೋರಿಸಿ ಅವರನ್ನು ರಕ್ಷಿಸಿಬಿಡಬಹುದಷ್ಟೆ? ನಿನಗೊಂದು ಭ್ರಮೆ ಹುಟ್ಟಿಸುವ ಅಗತ್ಯವೇನಿದೆ?" ಎಂದನು ರಾಜ.

"ಈ ಕಳ್ಳರು ಈಗ ಪಶ್ಚಾತ್ತಾಪಪಡುತ್ತಿದ್ದಾರೆ. ಮಹಾ ಕ್ರೂರರಾದವರು ಇಂಥಾ ಪರಿವರ್ತನೆಗೆ ಬರುವುದೇ ಒಂದು ಅದ್ಭುತವಲ್ಲವೇ ಪ್ರಭೂ?" ಎಂದನು ಸಮೀರ ವಿನಯದಿಂದ ಬಾಗಿ.

ರಾಜನು ಗಟ್ಟಿಯಾಗಿ ನಗುತ್ತ, "ನಿನಗೊಬ್ಬನಿಗೆ ನಿಜವೆನಿಸಿದರೆ ಆಯಿತೆ? ಇಲ್ಲಿ ಅದೇನೂ ಸಾಗದು. ಈ ಭೈರವಮಲ್ಲನನ್ನು ಕಾಪಾಡಲು ಭಗವಂತನು ಸಂಕಲ್ಪಿಸಿದ್ದರೆ ನನ್ನನ್ನೇಕೆ ಕೇಳಬೇಕು? ಗಲ್ಲಿನ ಹಗ್ಗವನ್ನು ಒಂದೇ ಒಂದು ಮಿಂಚಿನ ಶಕ್ತಿಯು ಅಗ್ನಿ ಜ್ವಾಲೆಯಿಂದ ಛೇದಿಸಿಬಿಡಬಹುದಷ್ಟೆ?" ಎಂದನು.

ಸಮೀರನು ನಿರುತ್ಸಾಹದಿಂದ ರಾಜನಿಗೆ ವಂದಿಸಿ, ಹಿಂದಿರುಗಿ ಅಪೂರ್ವನನ್ನು ನೆನೆದು ತನ್ನ ಮುಂದೆ ಬರಿಸಿ, ನಡೆದ ಸಂಗತಿಯನ್ನು ಹೇಳಿದನು.

"ರಾಜನಿಗೆ ನೋಡಬೇಕೆಂದಿರುವ ಅದ್ಭುತವು ನಡೆದೇ ನಡೆಯುತ್ತೆ! ಚಿಂತಿಸಬೇಡ" ಎಂದು ಹೇಳಿದನು ಅಪೂರ್ವ. —(ಇನ್ನೂ ಇದೆ)






ಳ

[ಅಪೂರ್ವನು ಸಮೀರನೆಂಬ ಹುಡುಗನನ್ನು ಕೊಳ್ಳೇಗಾರರ ಕೈಯಿಂದ ತಪ್ಪಿಸಿ ರಕ್ಷಿಸಿದನು. ಅಪೂರ್ವನ ಆದೇಶದಂತೆ ಸಮೀರನು ಕೊಳ್ಳೇಗಾರರನ್ನೆಲ್ಲಾ ರಾಜಭಟರಿಂದ ಹಿಡಿಸಿದನು. ರಾಜನು ಅವರಿಗೆಲ್ಲಾ ಮರಣ ಶಿಕ್ಷೆ ವಿಧಿಸಿದನು. ಪಾಪಕೃತ್ಯಗಳಿಗೆ ಪಶ್ಚಾತ್ತಾಪ ಪಡುವ ಕಳ್ಳರನ್ನು ಕ್ಷಮಿಸುವಂತೆ ಅಪೂರ್ವನ ಆದೇಶ ವನ್ನು ಸಮೀರನು ರಾಜನೊಂದಿಗೆ ಹೇಳಿದನು. ರಾಜನು ಅದಕ್ಕೆ ಒಪ್ಪಲಿಲ್ಲ. —ಇನ್ನು ಓದಿರಿ]

ಕಣ್ಣು ಕುಕ್ಕಿದರೂ ಕಾಣದಂತಹ ಕಗ್ಗತ್ತಲೆಯ ಕಾರಾಗಾರದೊಳಗೆ ಕೊಳ್ಳೇಗಾರರೆಲ್ಲಾ ಬಂಧಿಸಲ್ಪಟ್ಟಿದ್ದರು. "ಅಯ್ಯೋ ನಮ್ಮ ಕರ್ಮವೇ!" ಎಂದು ಎಲ್ಲಾ ಕಳ್ಳರ ಮನಸ್ಸಿನೊಳಗೂ ಸಂಕಟವೇ. ಒಬ್ಬ ಕಳ್ಳನು ಇನ್ನೊಬ್ಬ ಕಳ್ಳನನ್ನು ಮುಟ್ಟಿ, "ಏನಪ್ಪಾ, ಆ ಕಾಣದ ದೇವನ ಮಾತು ನಿಜವಾಗುತ್ತೇ ಅಂತ ನೀನು ನಂಬುವಿಯಾ?" ಎಂದು ಕೇಳಿದನು.

"ನಿನಗೆ ಹೇಗೆ ನಂಬಲು ಸಾಧ್ಯವಿಲ್ಲವೆನಿಸುತ್ತೋ ನನಗೂ ಹಾಗೆಯೇ ಕಾಣುತ್ತದೆ" ಎಂದು ಅವನು ಉತ್ತರ ಕೊಟ್ಟನು.

"ಆ ದೇವನು ದಯ ಮಾಡಿದರಲ್ಲದೆ ಈ ರಾಜ ಮಾನವ ಹಂತಕರನ್ನು ಕ್ಷಮಿಸುವಂತೆ ಕಾಣುವುದಿಲ್ಲ. ಅದಕ್ಕೇ ನಮ್ಮ ನಮ್ಮ ಇಷ್ಟ ದೇವರನ್ನು ಸ್ಮರಿಸಿ ಕೊಳ್ಳಲು ಹೇಳಿದ್ದು" ಎಂದನು ಇನ್ನೊಬ್ಬ ಕಳ್ಳ.

"ಹೂಂ. ಮರಣ ಶಿಕ್ಷೆ ಅಮಲುಪಡಿಸುವಾಗಲೂ ಇಷ್ಟದೈವವನ್ನು ಸ್ಮರಿಸುವಂತೆ ಹೇಳಿಯೇ ತಲೆ ಕಡಿಯುವುದು!" ಎಂದನು ಮತ್ತೊಬ್ಬ ಕಳ್ಳ.

ಅವರ ಮಾತುಗಳನ್ನು ಕೇಳಿದ ಭೈರವಮಲ್ಲನು, "ಏಕೆ ಹೀಗೆ ಅಂಜುಕುಳಿಗಳಾಗಿ ಅಳುತ್ತಿರುವಿರಿ? ಧೈರ್ಯವಿಲ್ಲವೇ ನಿಮಗೆ?" ಎಂದನು ಕೋಪದಿಂದ.



ಆಮೇಲೆ "ಹೌದು, ನಾನೇ! ನಾನೇ!" ಎಂದು ಎರಡು ಮೂರುಬಾರಿ ಹೇಳಿಕೊಂಡನು.

ಆಗ ಈ ಮೊದಲು ಅವರ ಕಿವಿಗಳಿಗೆ ಬಿದ್ದ ಅಪೂರ್ವನ ಮಧುರ ಕಂಠಸ್ವರವು ಮತ್ತೆ ಈಗಲೂ ಕೇಳಿಸತೊಡಗಿತು: "ಏನಿದು, ಬುದ್ಧಿ ಬೆಳೆದ ನೀವೆಲ್ಲಾ ಹೀಗೆ ಹೇಳಿಕೊಳ್ಳುವಿರಿ? ಏನೂ ಅರಿಯದ ಹಸುಕಂದಮ್ಮಗಳ ಹಾಗೆ ಮಾತಾಡಿಕೊಳ್ಳುವಿರೇಕೆ? ತಪ್ಪುಗಳನ್ನೆಲ್ಲಾ ಭೈರವಮಲ್ಲನ ಮೇಲೆ ತಳ್ಳಿ, ಇನ್ನೂ ನಿಮ್ಮನ್ನು ನೀವೇ ಮೋಸ ಮಾಡಿಕೊಳ್ಳಬೇಡಿರಿ. ನೀವು ತಿಳಿದೇ ಪಾಪ ಕೆಲಸ ಮಾಡಿದ್ದೀರಿ. ಅದಕ್ಕೆಲ್ಲಾ ನೀವೂ ಬಾಧ್ಯರೇ. ಶಿಕ್ಷಾರ್ಹರೇ! ಅಲ್ಲವೆನ್ನಲು ಸಾಧ್ಯವೇ?"

ಅದಕ್ಕೆ ಉತ್ತರಿಸಲು ಯಾರಿಗೂ ಸಾಧ್ಯವಾಗಲಿಲ್ಲ.

ಸ್ವಲ್ಪ ಹೊತ್ತಿನ ಮೇಲೆ, ಭಯಂಕರ ನಿಶ್ಶಬ್ದತೆಯನ್ನು ಕಳೆಯುವಂತೆ ಭೈರವಮಲ್ಲನು ಆ ಕಂಠಸ್ವರ ಹೊರಟ ಕತ್ತಲೆಯ ಕಡೆ ನೋಡಿ, "ಓ ದೇವಾ! ನೀನು ನಮ್ಮನ್ನು ನಿಜವಾಗಿಯೇ ರಕ್ಷಿಸಬಲ್ಲೆಯಾ? ನಮ್ಮನ್ನು ಗಲ್ಲಿಗೇರಿಸುವ ದಿನವನ್ನು ಕೂಡಾ ಕಾರಾಗಾರದ ಕಾವಲುಗಾರರು ತಿಳಿಸಿದ್ದಾರೆ" ಎಂದನು.

"ನಂಬಿರಿ. ನಿಮ್ಮ ನಿಮ್ಮ ಇಷ್ಟದೈವವನ್ನು ಪ್ರಾರ್ಥಿಸಿಕೊಂಡಿರಿ. ಒಳ್ಳೆಯ ಮನಸ್ಸಿನವರಿಗೆ ಒಳ್ಳೆಯದೇ ನಡೆಯುತ್ತದೆ" ಎಂದನು ಅಪೂರ್ವ.

"ಧೈರ್ಯವೆಲ್ಲಿದೆ? ಯಾರಿಗಿದೆ? ಅಂಜುಬುಳಿಗಳಲ್ಲದೆ ಮತ್ತೆಂಥವರು ನಾವು? ಇಷ್ಟು ದಿನ ಮಾಡಿದ ಕೆಲಸ ಧೈರ್ಯ ಸಾಹಸ ಕೃತ್ಯಗಳೇನು? ಯಾರು ಯಾರೋ ಕಷ್ಟಪಟ್ಟು ಸಂಪಾದಿಸಿದ ಹಣವನ್ನು ನಾವು ಹೇಗೆ ಕೊಳ್ಳೆ ಹೊಡೆದಿದ್ದೇವೆ? ನಿರಾಯುಧರಾದ ಪ್ರಯಾಣಿಕರ ಮೇಲೆ, ಏನೂ ಮಾಡಲಾಗದ ಬಾಲ ವೃದ್ಧ ಹೆಂಗುಸರ ಮೇಲೆ ಬಿದ್ದು ಕೊಂದು ಅಪಹರಿಸುವ ಕಾರ್ಯ ವೀರ ಕೃತ್ಯವೆ? ಸಾಹಸ ಕಾರ್ಯವೆ? ನಮ್ಮಂಥ ಅಂಜುಬುಳಿಗಳಲ್ಲದೆ ಇನ್ನಾರು ಮಾಡುವರು ಇಂಥಾ ಪಾಪ ಕೃತ್ಯ! ಛೀಛೀ! ಇದಕ್ಕಿಂತ ನಾಚಿಗೇ ಕೆಲಸ ಬೇರೊಂದಿದೆಯೆ? ಇದನ್ನೆಲ್ಲಾ ನಮಗೆ ಕಲಿಸಿದವನು ಇಲ್ಲಿಯೇ ಇರುವ ಭೈರವಮಲ್ಲ ತಾನೆ?" ಎಂದು ರೋದಿಸಿಕೊಂಡು ತಲೆ ಚಚ್ಚಿಕೊಂಡರು ಕಳ್ಳರು.

ಎಲ್ಲರೂ ಸೇರಿ ಹಾಗಂದುದನ್ನು ಕೇಳಿ ಭೈರವಮಲ್ಲನು ಏನೂ ಹೇಳಲಾಗದೆ ಸುಮ್ಮನಾದನು.

* * *

ಎಷ್ಟೋ ಕಾಲದಿಂದ ಹೆದರಿಸಿಕೊಂಡಿದ್ದ ಕೊಳ್ಳೇಗಾರರ ಗುಂಪು ಈ ದಿನದಲ್ಲಿ ಅಂತ್ಯವಾಗುವುದೆಂದು ಜನರೆಲ್ಲಾ ಸಂತೋಷದಿಂದ ಮಾತಾಡಿಕೊಳ್ಳುತ್ತಿದ್ದರು. ಬೆಳಗಾದ ಕೂಡಲೇ ಎಲ್ಲಾ ಕೊಳ್ಳೇಗಾರರನ್ನೂ ಒಬ್ಬರ ಹಿಂದೊಬ್ಬರಂತೆ ಗಲ್ಲಿಗೇರಿಸಲಾಗುವುದೆಂದು ಪ್ರಕಟಿಸಲಾಗಿತ್ತು.

ಆದುದರಿಂದ ಬೆಳಗಾಗುವುದಕ್ಕೆ ಮೊದಲೇ ದೇಶದ ಪ್ರಜೆಗಳು ಗುಂಪುಗುಂಪಾಗಿ ಬಂದು ವಧ್ಯ

ಸ್ಥಾನದ ಹತ್ತಿರ ಕೂಡುತ್ತಿದ್ದರು. ಮತ್ತೆ ಕೆಲವರು ಕಾರಾಗಾರದೊಳಗಿನಿಂದ ವಧ್ಯಸ್ಥಾನದವರೆಗಿನ ದಾರಿಯ ಇಕ್ಕೆಲಗಳಲ್ಲಿಯೂ ಸಾಲುಗಟ್ಟಿ ನಿಂತರು.

ಒಂದು ಕುದುರೆಯ ಮೇಲೆ ಕೋತ್ವಾಲನು ಮುಂದಾಗಿ ಹೊರಟನು. ಅವನ ಹಿಂದೆ ಸೈನಿಕರು ಕೈಗಳನ್ನು ಬಂಧಿಸಿದ ಕಳ್ಳರನ್ನು ವಧ್ಯಸ್ಥಾನದ ಕಡೆಗೆ ನಡೆಯಿಸಿಕೊಂಡು ಹೊರಟರು. ಮುಂದೂ ಹಿಂದೆಯೂ ಆಯುಧಧಾರಿಗಳಾದ ಸೈನಿಕರಿದ್ದರು.

ದಾರಿಯ ಒಂದು ಬದಿಯಲ್ಲಿ ನಿಂತಿದ್ದ ಜನರ ಗುಂಪಿನಿಂದ ಸುತ್ತುಮುತ್ತಲಿನವರನ್ನು ದೂಡಾಡಿ ಕೊಂಡು ಒಬ್ಬಳು ಮುಂದಕ್ಕೆ ಹಾರಿ ಕೋಪಾ ವೇಶದ ಕಂಠದಿಂದ, "ಹಂತಕಾ! ಪಾತಕಾ! ರಾಕ್ಷಸಾ!..." ಎನ್ನುತ್ತ ವೇಗವಾಗಿ ಹೋಗಿ ಭೈರವಮಲ್ಲನ ಮುಖದ ಮೇಲೆ ಹೊಡೆದು "ಅಯ್ಯಾ, ಶಿಕ್ಷೆ ಕೊಡುವವರೆ! ನನ್ನ ಗಂಡ ಸ್ನೇಹಿತ ರೊಂದಿಗೆ ಕೂಡಿ ಧನದೊಂದಿಗೆ ಹಿಂದಿರುಗಿ ಬರು ವಾಗ ಈ ದುಷ್ಟರೆಲ್ಲಾ ಕೂಡಿ ಹಣದ ಮೂಟೆ ಯನ್ನು ಎಳೆಯಲು ಬಂದರು. ನನ್ನ ಗಂಡ ಕೈಯಲ್ಲಿದ್ದ ದೊಣ್ಣೆಯಿಂದ ಈ ದುಷ್ಟರ ಕೈಗಳನ್ನು ಮುರಿದನು. ಆಗ ಹೆದರಿ ಓಡಿಹೋದರು. ಈ ಅಂಜುಕುಳಿ ಬಂಟರು ಸ್ವಲ್ಪಹೊತ್ತಿಗೆ ಸದ್ದಿಲ್ಲದೆ ಬಂದು ಹಿಂದಿನಿಂದ ನನ್ನ ಗಂಡನ ತಲೆಗೆ ಹೊಡೆದು ಕೊಂದು ಇದ್ದದ್ದೆಲ್ಲಾ ಎಳೆದುಕೊಂಡು ಹೋದರು. ಇವನೇ ಇವರ ನಾಯಕ?..." ಎಂದು ಅಳ ತೊಡಗಿದಳು.

ಅವಳ ಮಾತಿನಿಂದ ರೊಚ್ಚಿಗೆದ್ದ ಕೆಲವರು ಭೈರವ ಮಲ್ಲನನ್ನು ಹೊಡೆಯಲು ಬಂದರು. ಅದನ್ನು ಗಮನಿಸಿದ ಕೋತ್ವಾಲನು ತನ್ನ ಕುದುರೆಯನ್ನು ಹಿಂದಕ್ಕೆ ತಿರುಗಿಸಿ, "ಸ್ವಲ್ಪ ತಡೆಯಿರಿ. ನಿಮ್ಮ ಸಂಕಟ, ನೋವು, ರೊಚ್ಚು, ಕೆಚ್ಚುಗಳೆಲ್ಲಾ ಸೇರಿಯೇ ಈ ಗತಿ ಬಂದಿದೆ. ನಿಮ್ಮ ಕೋಪಾವೇಶಗಳೂ



ನ್ಯಾಯವೇ. ಅದಕ್ಕಾಗಿಯೇ ಈಗ ಇವರಿಗೆಲ್ಲಾ ಮರಣ ಶಿಕ್ಷೆ ಮಹಾರಾಜರಿಂದ ಕೊಡಲಾಗಿದೆ. ಅದೀಗ ನೆರವೇರುತ್ತದೆ. ಈ ಸಮಯದಲ್ಲಿ ನೀವು ಹೀಗೆಲ್ಲಾ ಮಾಡುವುದು ಉಚಿತವಲ್ಲ. ನಮ್ಮ ಕೆಲಸ ನೆರವೇರಲು ತೊಂದರೆ ಕೊಡಬೇಡಿರಿ. ಸಹನೆ ಯಿಂದಿರಿ" ಎಂದನು.

ಆಗ ಭೈರವಮಲ್ಲನು ಕೈಗಳನ್ನು ಮೇಲೆತ್ತಿ ಕಣ್ಣೀರು ಸುರಿಸುತ್ತ, "ಓ! ತಾಯಂದಿರೇ! ತಂದೆ ಯಂದಿರೇ! ಈ ನನ್ನ ಜತೆಗಾರರೆಲ್ಲರಿಗಿಂತಲೂ ನಾನೇ ಹೆಚ್ಚಿನ ಪಾಪಾತ್ಮನೆಂಬುದು ನಿಜವೇ. ಇಲ್ಲಿರುವವರು ಮಾತ್ರವೇ ಅಲ್ಲ, ಎಷ್ಟೋ ಗಂಡಂದಿ ರನ್ನು ಕೊಂದಿದ್ದೇನೆ. ಮಕ್ಕಳನ್ನೂ, ಮುದುಕರನ್ನೂ ಕೊಲ್ಲಿಸಿದ ಪರಮ ಕಿರಾತಕನು ನಾನೇ. ನಾನೇ! ನೀವುಗಳು ನನ್ನನ್ನು ಕ್ಷಮಿಸಿದರೂ ಆ ದೇವನು ಸುಮ್ಮನಿರಲಾರನು. ನನಗೆ ಘೋರಾತಿಘೋರ ನರಕವೇ ಗತಿ!" ಎಂದನು ದೀನನಾಗಿ.



"ನಿಜವೇ, ರಾಜಾಜ್ಞೆಗೊಳಗಾದ ನನ್ನಿಂದೇನೂ ಮಾಡಲಾಗದೆಂದು ನನಗೆ ಗೊತ್ತಿದೆ. ನನಗೆ ಮರಣ ದಂಡನೇ ನ್ಯಾಯವೇ. ಆದರೆ ಈ ನನ್ನ ಜತೆಗಾರರಿಗಾದರೂ ಕ್ಷಮೆ ದೊರೆತರೆ ನನಗೆ ಸ್ವಲ್ಪ ಸಮಾಧಾನವಾಗುತ್ತಿತ್ತು. ಅವರನ್ನು ಕ್ಷಮಿಸಿ ನನ್ನನ್ನು ಚಿತ್ರವಧೆ ಮಾಡಿದರೂ ನನಗೆ ದುಃಖವಿಲ್ಲ. ನೂರು ಸಾರಿ ಸಾಯಲಿಕ್ಕೂ ಸಿದ್ಧನಾಗಿದ್ದೇನೆ" ಎಂದನು ಭೈರವಮಲ್ಲ.

"ಇನ್ನು ಅದಾವುದಕ್ಕೂ ಸಮಯವಿಲ್ಲ. ಮಹಾರಾಜರ ತೀರ್ಪಿಗೆ ಇದಿರೇ ಇಲ್ಲ. ತೀರ್ಪನ್ನು ಪುನಃ ಪರಿಶೀಲನೆ ಮಾಡುವಂತೆ ಪ್ರಾರ್ಥಿಸಿಕೊಳ್ಳುವ ಸಮಯವೂ ದಾಟಿ ಹೋಗಿದೆ. ನಿಮ್ಮಲ್ಲಿ ಇಲ್ಲದ ಆಶೆಯನ್ನು ಬರಗೊಳಿಸಲಾರೆನು. ನೀವೀಗ ಉರುಳು ಕಂಬದ ಮುಂದೆ ನಿಲ್ಲಿರಿ. ನಡೆಯಿರಿ" ಎಂದನು.

ಎಲ್ಲರೂ ವಧ್ಯಸ್ಥಾನವನ್ನು ಸಮೀಪಿಸಿದರು. ಈಗ ಸಿಕ್ಕಿಬಿದ್ದ ಕಳ್ಳರು ಇಪ್ಪತ್ತು ಮಂದಿಯಷ್ಟಿದ್ದರು. ಮುಖ್ಯ ಕಳ್ಳರು ಇಷ್ಟೇ ಎಂದು ಇವರಿಂದ ಗೊತ್ತಾಗಿತ್ತು. ಅವರೆಲ್ಲರನ್ನೂ ಎತ್ತರದಲ್ಲಿರುವ ದಿಬ್ಬದ ಮೇಲೆ ನಡೆಯಿಸಿದರು. ಗಲ್ಲಿನ ಕಂಬವೂ, ಅದರಲ್ಲಿ ನೇತಾಡಿಕೊಂಡಿರುವ ಉರುಳಿನ ಹಗ್ಗವೂ ಕಾಣುತ್ತಿತ್ತು. ಕಳ್ಳರ ಕಾಲುಗಳಿಗೂ ಸಂಕಲೆ ಕಟ್ಟಿದರು.

ಕೋತ್ವಾಲನು ಕಟುಕನನ್ನು ನೋಡಿ, "ಎಲ್ಲವೂ ಸರಿಸಿದ್ಧವೇ ?" ಎಂದು ಕೇಳಿದನು.

"ಸರ್ವಸಿದ್ಧ" ಎಂದನು ಕಟುಕ.

"ಮೊದಲು ಭೈರವಮಲ್ಲ. ಆಮೇಲೆ ಉಳಿದವರು" ಎಂದನು ಕೋತ್ವಾಲ.

ಇಬ್ಬರು ಭಟರು ಭೈರವಮಲ್ಲನನ್ನು ನಡೆಯಿಸಿಕೊಂಡು ಗಲ್ಲುಗಂಬದ ಅಡಿಯಲ್ಲಿ ನಿಲ್ಲಿಸಿದರು.

"ಭೈರವಾ, ನಿನ್ನ ಕೊನೇ ಪ್ರಾರ್ಥನೆ ಏನಾದರಿದ್ದರೆ ಆಗಲಿ" ಎಂದನು ಕೋತ್ವಾಲ.

ಆ ಮಾತುಗಳನ್ನು ಕೇಳಿ ಗುಂಪಿನಲ್ಲಿದ್ದವರು ಶಾಂತರಾದರು. ಮುಂದೆ ಬಂದವರು ಹಿಂದೆ ಸರಿದರು. ಭೈರವಮಲ್ಲನ ಮುಖಕ್ಕೆ ಹೊಡೆದವಳು ಕೂಡಾ ದೊಡ್ಡ ನಿಟ್ಟುಸಿರುಬಿಟ್ಟಳು. ಕೆಲವರು ಇಂಥಾ ಕಷ್ಟ ಯಾರಿಗೂ ಬಾರದಿರಲೆಂದು ತಮ್ಮ ತಮ್ಮೊಳಗೆ ಅಂದುಕೊಂಡರು.

ಕೋತ್ವಾಲನು ಭೈರವಮಲ್ಲನ ಕಡೆಗೆ ತಿರುಗಿ, "ನೀವೆಲ್ಲರೂ ಈಗ ಮಾಡಿದ ತಪ್ಪುಗಳಿಗೆ ಪಶ್ಚಾತ್ತಾಪವಡುತ್ತಿರುವಿರೆಂದಾಯಿತು. ಆದರೆ ನೀವು ಮಾಡಿದ ತಪ್ಪುಗಳು ಕ್ಷಮಿಸತಕ್ಕಂಥವೇ ಅಲ್ಲ. ನೀವು ಕೊಲ್ಲಲು ನೋಡಿದ ಹುಡುಗ ಸಮೀರನೇ ನಿಮ್ಮ ಪ್ರಾಣಗಳನ್ನು ಕಾಪಾಡಬೇಕೆಂದು ಮಹಾರಾಜರೊಂದಿಗೆ ಪ್ರಾರ್ಥನೆ ಮಾಡಿದ್ದಾನೆ. ಆದರೆ ದುರದೃಷ್ಟದಿಂದ ಮಹಾರಾಜರು ಒಪ್ಪಿಗೆ ಕೊಡಲಿಲ್ಲ. ನಿಮ್ಮೆಲ್ಲರ ಪಾಪಗಳ ಕೊಡವು ತುಂಬಿ ಬಂದುದರಿಂದಲೇ ಈಗ ಮುಳುಗುತ್ತದೆ !" ಎಂದನು.

ಭೈರವಮಲ್ಲನು ಕಟ್ಟಲ್ಪಟ್ಟ ಕೈಗಳನ್ನು ಮೇಲೆತ್ತಿ "ನನ್ನಿಂದ ಶತದುಃಖಕ್ಕೆ ಒಳಗಾದವರೆಲ್ಲರಿಂದಲೂ ಕ್ಷಮೆ ಕೇಳುತ್ತಿದ್ದೇನೆ. ನನ್ನ ಮನಸ್ಸನ್ನರಿತ ಓ ದೇವಾ! ನನ್ನನ್ನು ಕ್ಷಮಿಸು!" ಎಂದು ಪ್ರಾರ್ಥಿಸಿ ಕೊಂಡನು.

ತರುವಾಯ ಕಟುಕರಿಬ್ಬರು ಭೈರವಮಲ್ಲನನ್ನು ಗಲ್ಲುಗಂಬದ ಬುಡದಲ್ಲಿ ನಿಲ್ಲಿಸಿ, ಅವನ ಕೊರಳಿಗೆ ಉರುಳು ಹಗ್ಗವನ್ನು ತಗಲಿಸಿದರು.

ದಿಬ್ಬದ ಕೆಳಗೆ ನಿಂತುಕೊಂಡಿದ್ದ ಜನರು ನಿಶ್ಶಬ್ದ ವಾಗಿ ನೋಡುತ್ತಿದ್ದರು. ಯಾರೂ ಉಸಿರು ಕೂಡಾ ಗಟ್ಟಿಯಾಗಿ ಬಿಡುತ್ತಿದ್ದಿಲ್ಲ.

ಕೋತ್ವಾಲನು ಕಟುಕರೊಂದಿಗೆ, "ನಾನು ಒಂದರಿಂದ ಹತ್ತರವರೆಗೆ ಹೇಳುತ್ತೇನೆ. ಹತ್ತು ಎಂದ ಕೂಡಲೇ ಹಗ್ಗವನ್ನು ಎಳೆಯಬೇಕು" ಎಂದನು.

"ಅಪ್ಪಣೆ" ಎಂದರು ಕಟುಕರು.

ಕೋತ್ವಾಲನ ಬಾಯಿಯಿಂದ ಲೆಕ್ಕ ಹೊರಟಿತು. "ಒಂದು, ಎರಡು..." ಎನ್ನುತ್ತಿರಲು ಜನರು ಭಯದಿಂದಲೂ, ಉತ್ಸಾಹದಿಂದಲೂ ಕ್ಷಣ ಗಣನೆ ಮಾಡುತ್ತಿದ್ದರು.

ಸೂರ್ಯೋದಯವಾಗಿ ಎಳೆ ಚೆಂಗಿರಣ ಗಲ್ಲು ಗಂಬದ ಮೇಲೆ ಬಿತ್ತು. ಬಲವಾದ ಉರುಳು ಹಗ್ಗಕ್ಕೆ ಸವರಿದ ಎಣ್ಣೆಯಿಂದ ಸೂರ್ಯಕಾಂತಿ ತಳತಳನೆ ಹೊಳೆಯಿತು.

"ಎಂಟು" ಎಂದು ಕೋತ್ವಾಲನ ಬಾಯಿಂದ ಹೊರಬಿತ್ತು.

ಕಟುಕ ಮುಖ್ಯನ ಕೈಗಳು ಹಗ್ಗವನ್ನು ಬಿಗಿ ಹಿಡಿದುವು.

"ಒಂಬತ್ತು"

ಗಲ್ಲುಗಂಬದ ಪಕ್ಕದಲ್ಲಿ ಅರ್ಧ ವೃತ್ತಾಕಾರವಾಗಿ ನಿಂತಿದ್ದ ಕಳ್ಳರು ರೋದನೆಯ ದನಿ ತೆಗೆದರು.



"ಹತ್ತು!"

ಕಟುಕನು ಬಲವಾಗಿ ಹಗ್ಗವನ್ನು ಎಳೆದನು. ಆ ಎಳೆತಕ್ಕೆ ಭೈರವಮಲ್ಲನ ಶರೀರ ಮೇಲಕ್ಕೆ ಹೋಗಿರ ಬೇಕು. ಹಾಗೇನೂ ಆಗದೆ, ಬದಲಾಗಿ ಉರುಳು ಹಗ್ಗದ ಮೇಲ್ಭಾಗವು ತುಂಡಾಗಿ ಹೋಯಿತು.

"ಏನದು?" ಕೋತ್ವಾಲನು ಕೀಚು ಕಂಠದಿಂದ ಅರಚಿದನು.

ಕಟುಕನಿಗೆ ಏನು ಹೇಳಲೂ ತೋರದೆ, "ಏ. ಓ. ಆ" ಎನ್ನುತ್ತ ಕಣ್ಣುಗಳನ್ನು ಇಷ್ಟಗಲ ಮಾಡಿ ಮೇಲೆ ಕೆಳಗೆ ನೋಡಿದನು. ಅವನು ಈವರೆಗೆ ಎಷ್ಟೋ ಮಂದಿಯನ್ನು ಗಲ್ಲಿಗೇರಿಸಿದ್ದಾನೆ. ಅಂಥಾ ಬಲವಾದ ಹಗ್ಗ ಈವರೆಗೂ ಹೀಗಾಗಲಿಲ್ಲ.

ದಿಬ್ಬದ ಕೆಳಗೆ ನಿಂತಿದ್ದ ಮೂವರು ರಾಜಾಧಿ ಕಾರಿಗಳು ದಿಬ್ಬದ ಮೇಲೇರಿ ಕಟುಕರನ್ನು ನೋಡಿ, "ಹಗ್ಗವನ್ನು ಸರಿಯಾಗಿ ಪರೀಕ್ಷಿಸಿ ನೋಡಲಿಲ್ಲವೇ?" ಎಂದು ಕೇಳಿದರು.



"ಬಹು ಜೋರಾಗಿ ಎಳೆದು ನೋಡಿದ್ದೇವೆ" ಎಂದನು ಕಟುಕರ ಮುಖ್ಯಸ್ಥ.

"ತಡ ಕೂಡದು. ಇನ್ನೊಂದು ಸಾರಿ ಉರುಳೇರಿಸಿರಿ!" ಎಂದನು ಮುಖ್ಯಾಧಿಕಾರಿ.

ಕಟುಕನು ಆಚೆಯಲ್ಲಿದ್ದ ಹೊಸ ಹಗ್ಗವನ್ನು, ರಾಜೋದ್ಯೋಗಿಗಳಿಗೆ ತೋರಿಸಿ, ಉರುಳು ಸರ್ರನೆ ಬೀಳುವಲ್ಲಿಗೆ ಎಣ್ಣೆ ತಡವಿ, ಅದನ್ನು ಗಲ್ಲುಗಂಬಕ್ಕೆ ಕಟ್ಟಿ, ಭೈರವಮಲ್ಲನ ಕೊರಳಿಗೆ ತಗಲಿಸಿದನು. ಮತ್ತೆ ಕೋತ್ವಾಲನು ಮೊದಲಿನ ಹಾಗೆಯೇ "ಹತ್ತು" ಹೇಳಿದ ಕೂಡಲೇ ಕಟುಕನು ಹಗ್ಗವನ್ನು ಮತ್ತೆ ಎಳೆದನು.

ಮತ್ತೆ ಆ ಹಗ್ಗವು ಲಟ್ಟನೆ ತುಂಡಾಯಿತು. ಭೈರವಮಲ್ಲ ನಿಂತಲ್ಲೇ ಇದ್ದನು.

ಈ ವಿಚಿತ್ರವನ್ನು ನೋಡಿ ಯಾರ ಬಾಯಿಯಿಂದಲೂ ಮಾತೇ ಹೊರಡಲಿಲ್ಲ. ಸ್ವಲ್ಪಹೊತ್ತಿನ ಮೇಲೆ ಕೋತ್ವಾಲನು "ಇದೇನೋ ಮಾನವಾತೀತವಾದ ಅದ್ಭುತ ಶಕ್ತಿಯೇ ಇರಬೇಕು! ಈ ಸಂಗತಿಯನ್ನು ಮಹಾರಾಜರಿಗೆ ತಿಳಿಯಪಡಿಸಬೇಕು. ಇಲ್ಲದಿದ್ದರೆ ನಾವು ಮಹಾಪರಾಧಿಗಳಾದೇವು! ನಾನೀಗಲೇ ಬರುತ್ತೇನೆ. ಬರುವುದರೊಳಗೆ ಬೇರೆ ಇನ್ನೊಂದು ಹಗ್ಗವನ್ನು ತಯಾರಾಗಿಡಿ. ಬೇರೆ ಯಾವ ಕ್ರಮವನ್ನು ಮಹಾರಾಜರು ಹೇಳುವರೋ ತಿಳಿದು ಬರುತ್ತೇನೆ" ಎಂದು ಹೇಳಿ ಕುದುರೆಯ ಮೇಲೆ ರಾಜಭವನದ ಕಡೆಗೆ ಹೋದನು.

ಇನ್ನಿರುವುದು ಎರಡು ವಿಧ. ಕತ್ತಿಯಿಂದ ತಲೆ ಹಾರಿಸುವುದು. ಅಥವಾ ಶೂಲಕ್ಕೇರಿಸುವುದು. ಯಾವುದಕ್ಕೂ ಮಹಾರಾಜರ ಆಜ್ಞೆ ಬೇಕು.

ಆದರೆ ಕೋತ್ವಾಲನೊಬ್ಬನೇ ಹಿಂದಿರುಗಿ ಬರಲಿಲ್ಲ. ಸ್ವತಃ ಮಹಾರಾಜನೇ ಮಂತ್ರಿ, ಸೇನಾಧಿಪತಿಗಳೊಂದಿಗೆ ವಧ್ಯಸ್ಥಾನಕ್ಕೆ ಚಿತ್ತೈಸಿದನು.

ರಾಜನು ಸ್ವತಃ ಕೈಯಲ್ಲಿ ಹಗ್ಗವನ್ನು ಹಿಡಿದು ಪರೀಕ್ಷೆ ಮಾಡಿದನು. ನಾಲ್ಕು ಭಟರಿಂದ ಎಳೆಯಿಸಿಯೂ ನೋಡಿದನು. ಆ ಹಗ್ಗವನ್ನು ಗಲ್ಲುಗಂಬಕ್ಕೆ ಕಟ್ಟಿ ಉರುಳು ಹಾಕಿ, ಭೈರವಮಲ್ಲನ ಕುತ್ತಿಗೆಗೆ ತಗಲಿಸಿದರು.

ಮತ್ತೆ ಕೋತ್ವಾಲನು ಒಂದರಿಂದ ಎಣಿಕೆಯನ್ನು ಪ್ರಾರಂಭಿಸಿ ಹತ್ತು ಎಂದು ಹೇಳಿದ ಕೂಡಲೇ ಕಟಕನು ಎಳೆದ ಕ್ಷಣದಲ್ಲೇ ಲಟಕ್ಕೆಂದು ಹಗ್ಗವು ತುಂಡಾಗಿ ಹೋಯಿತು.

ಮೂರನೇ ಸಾರಿ ಈ ವಿಚಿತ್ರವನ್ನು ನೋಡಿದ ಜನರ ಗುಂಪು "ಆಹಾ!" ಎಂದು ಘೋಷ ವೆಬ್ಬಿಸಿತು.

ಸ್ವಲ್ಪಹೊತ್ತಿನ ಮೇಲೆ ರಾಜನು ಎಲ್ಲರನ್ನೂ ನೋಡಿ, "ನಾನೇ ಹೀಗೆ ಬಂದದ್ದಕ್ಕೆ ಕಾರಣವಿದೆ. ಈ ಕಳ್ಳರ ವಿಚಾರಣೆಯ ಕಾಲದಲ್ಲಿ ಇವರ ಬಂಧನಕ್ಕೆ ಕಾರಣನಾದ ಹುಡುಗ ಸವಾರನು ಅವನನ್ನು ಕಾಪಾಡಿದ ದೇವನ ಪ್ರೇರಣೆ ಎನ್ನುತ್ತ ಇವರನ್ನೆಲ್ಲಾ

ಕ್ಷಮಿಸಲು ಹೇಳಿದ್ದಾನೆ. ನಾನು ನಂಬಲಿಲ್ಲ. ಅಂಥಾ ದೇವನೇ ಏನಾದರೂ ಅದ್ಭುತ ತೋರಿಸಿ ರಕ್ಷಿಸಲಿ ಎಂದು ಹೇಳಿದ್ದೆ. ಈಗ ನಡೆದದ್ದು ಸಮಿಾರನ ರಕ್ಷಕ ದೇವನೇ ತೋರಿಸಿದ ರಕ್ಷಣೆ ಎಂಬುದರಲ್ಲಿ ಸಂದೇಹವೇನಿಲ್ಲ. ಆದುದರಿಂದ ಭೈರವಮಲ್ಲನನ್ನೂ, ಅವನ ಜತೆಗಾರರನ್ನೂ ಬಿಡುಗಡೆ ಮಾಡುತ್ತೇನೆ. ಅವರು ಪಾಪಕೃತ್ಯವೇನೂ ಮಾಡದೆ ನಮ್ಮ ಪರ್ಯವೇಕ್ಷಣೆಯಲ್ಲಿ ಜೀವನ ಸಾಗಿಸಬೇಕು. ಇದಕ್ಕೆ ಯಾರೂ ಆಕ್ಷೇಪಿಸಬೇಡಿರಿ. ಇವರನ್ನು ಕ್ಷಮಿಸಿದವನು ನಾನಲ್ಲ, ದೇವರೇ ಎಂದು ನಂಬಿರಿ" ಎಂದು ಹೇಳಿದನು.

ರಾಜನ ಮಾತಿಗೆ ಸಮ್ಮತಿ ಸೂಚಿಸುವ ಉದ್ಗಾರಗಳಿಂದ ಜನರೆಲ್ಲಾ ಹರ್ಷಧ್ವಾನ ಮಾಡಿದರು.

ಭಟರು ಎಲ್ಲಾ ಕಳ್ಳರ ಕೈಕಾಲುಗಳಿಗೆ ತಗಲಿಸಿದ ಸಂಕಲೆಗಳನ್ನು ತೊಲಗಿಸಿದರು. "ರಾಜಾಜ್ಞೆ ಶಿರಸಾವಹಿಸಿಕೊಂಡೆವು" ಎಂದು ಅವರೆಲ್ಲಾ ರಾಜನ ಪಾದಗಳ ಕಡೆಗೆ ಕೈಮುಗಿದರು.

"ನೀವು ನಮಸ್ಕರಿಸಿ ಕೃತಜ್ಞತೆ ತೋರಿಸಬೇಕಾದದ್ದು ನನಗಲ್ಲ. ಅದೃಶ್ಯ ಶಕ್ತಿಯ ಆ ದೇವನಿಗೆ, ಆ ಕರುಣಾಮಯನ ದಯಕ್ಕೆ ಪಾತ್ರರಾಗುವ ಹಾಗೆ ನಿಮ್ಮ ಜೀವನ ಕ್ರಮವನ್ನು ತಿದ್ದಿಕೊಳ್ಳಬೇಕು" ಎಂದು ಆಶೀರ್ವಾದ ಮಾಡಿದನು ರಾಜ.

"ಮಹಾರಾಜರಿಗೆ ಜಯಜಯಾ!" ಎಂಬ ಜಯಘೋಷವು ಬಾಂದಳವನ್ನಡರಿತು.

* * *

ಸಮಿಾರನು ಅಪೂರ್ವನ ಬಳಿಗೆ ಹೋದನು. ಅರಣ್ಯದಲ್ಲಿ ಏಕಾಂತವಾಗಿ ಕುಳಿತಿದ್ದ ಅಪೂರ್ವನಿಗೆ ನಮಸ್ಕಾರ ಮಾಡಿ, "ಈ ಅದ್ಭುತವು ಹೇಗೆ ನಡೆಯಿತು?" ಎಂದು ಕೇಳಿದನು.

"ವೇಗವಾಗಿ ಓಡುತ್ತ ನಾನು ಗಾಳಿಯಲ್ಲಿ ಕಲೆತು, ಹುಟ್ಟುಹಾಕಿ ತಳ್ಳುತ್ತಾ ಅದ್ಭುತ ವೇಗದಲ್ಲಿ ಹೋಗುವಾಗ ಒಂದು ವೇಗದ ಮಟ್ಟಕ್ಕೆ ಮುಟ್ಟಿದ ಕೂಡಲೇ ನಾನು ಬೇರೆ ಯಾರಿಗೂ ಕಾಣಿಸದೆ ಗಾಳಿಯೊಂದಿಗೆ ಗಾಳಿಯೇ ಆಗಿಬಿಡುತ್ತೇನೆ. ತಕ್ಕಷ್ಟು ದೂರದಲ್ಲಿ ನಿಂತು ಆ ಕೋತ್ವಾಲನು 'ಐದು' ಎಂದು ಉಚ್ಚರಿಸಿದ ಕೂಡಲೇ, ಓಡುತ್ತಾ ವಧ್ಯಸ್ಥಾನ ಮುಟ್ಟಿದ ಕೂಡಲೇ ವೇಗವನ್ನು ಹೆಚ್ಚಿಸಿ ಅದೃಶ್ಯ ಶಕ್ತಿಯನ್ನು ಹೊರಬಿಟ್ಟು ಅಲ್ಲೇ ಸುಳಿದುಕೊಂಡಿದ್ದು 'ಹತ್ತು' ಎಂದಾಗಲೇ ಕತ್ತಿಯಿಂದ ಉರುಳು ಹಗ್ಗವನ್ನು ಕಡಿದು, ಮತ್ತೆ ಹಿಂದಿರುಗಿ ಯಥಾಸ್ಥಾನದಲ್ಲಿ ಸುಳಿದುಕೊಂಡಿರುತ್ತೇನೆ. ಇದೆಲ್ಲಾ ಗುರುಗಳು ನನಗೆ ಕೊಟ್ಟ ಶಕ್ತಿ!" ಎಂದು ಅರ್ಥವಿಸಿದನು ಬೊಂಬೆ ಮಾನವ ಅಪೂರ್ವ. ಸಮಿಾರನು ಮತ್ತೆ ತಲೆಬಾಗಿದನು. — (ಇನ್ನೂ ಇದೆ)





# ಅಪೂರ್ವನ ಸಾಹಸ ಯಾತ್ರೆಗಳು

೫

[ಸದಾನಂದ ಮುನಿ ಸೃಷ್ಟಿಸಿದ ಅಪೂರ್ವನೆಂಬ ಅದ್ಭುತ ಬೊಂಬೆ ಮಾನವನು ಸುಟ್ಟುಹೋಗುವ ಬಡವರ ಗುಡಿಸಲುಗಳನ್ನು ಆನೆಗಳ ಸಹಾಯದಿಂದ ಕಾಪಾಡಿದನು. ಅನಂತರ ಸಮೀರನೆಂಬ ಹುಡುಗನನ್ನು ಕೊಳ್ಳೇಗಾರರಿಂದ ರಕ್ಷಿಸಿ ಕಳ್ಳರನ್ನೆಲ್ಲಾ ಸೈನಿಕರ ಕೈಗೆ ಸಿಗುವಂತೆ ಮಾಡಿದನು. ಮಾಡಿದ ಪಾಪಗಳಿಗೆ ಪಶ್ಚಾತ್ತಾಪಪಟ್ಟ ಕಳ್ಳರನ್ನು ಒಳ್ಳೆಯ ಮಾರ್ಗಕ್ಕೆ ತಿರುಗಿಸಿ, ಅವರನ್ನು ಮರಣದಂಡನೆಯಿಂದ ತಪ್ಪಿಸಿದನು. ಅನಂತರ—]

ಆ ಬೊಂಬೆ ಮಾನವನು ತನ್ನನ್ನು ಸೃಷ್ಟಿಸಿದ ಸದಾನಂದ ಮುನಿಯ ಬಳಿಗೆ ಹೋಗಿ ಅಡ್ಡಬಿದ್ದು, ತಾನು ಮಾಡಿದುದನ್ನೆಲ್ಲಾ ಹೇಳಿದನು.

"ಕಂದಾ, ನಿನ್ನ ಕರ್ತವ್ಯವನ್ನು ನನ್ನ ಉದ್ದೇಶದಂತೆ ಸರಿಯಾಗಿಯೇ ನಿರ್ವಹಿಸಿರುತ್ತೀ. ಬಹಳ ಸಂತೋಷವಾಗಿದೆಯಪ್ಪಾ. ಹೀಗೆಯೇ ಮುಂದುವರಿಯುತ್ತಿರು" ಎಂದು ಆಪ್ಯಾಯತೆಯಿಂದ ಆಶೀರ್ವಾದ ಮಾಡಿದನು ಸದಾನಂದ ಮುನಿ.

"ತಂದೆಯೇ, ಅಡಿ ತೆಗೆದಿಟ್ಟ ಕ್ಷಣದಿಂದಲೂ ಒಂದರ ಮೇಲೆ ಇನ್ನೊಂದರಂತೆ ಇದಿರಾದ ದೊಡ್ಡ ದೊಡ್ಡ ದುಃಖದ ಪ್ರಸಂಗಗಳನ್ನು ಸರಿಪಡಿಸುವುದರಲ್ಲಿಯೇ ಕಾಲ ಕಳೆದುಹೋಯಿತು. ಭಗವಂತನಿಂದ ಸೃಷ್ಟಿಸಲ್ಪಟ್ಟ ಈ ಸುಂದರ ಪ್ರಪಂಚವನ್ನು ಸಾವಕಾಶವಾಗಿ ನೋಡಿ ಆನಂದಿಸಬೇಕೆಂಬುದು ನನ್ನ ಅಪೇಕ್ಷೆ" ಎಂದನು ಅಪೂರ್ವ.

"ಹಾಗೆಯೇ ನೋಡು ಕಂದಾ. ಹಾಗೆ ನೋಡುತ್ತಾ ನೀನು ಎಲ್ಲಿಗೆ ಹೋದರೂ ಅಲ್ಲಿಯ ಪರಿಸ್ಥಿತಿಗಳು ನಿನ್ನನ್ನು ಕಾರ್ಯಾಚರಣೆಗೆ ಪ್ರೇರೇಪಿಸದೆ ಬಿಡುವುದಿಲ್ಲ. ಪ್ರಪಂಚವು ಆನಂದನಿಲಯವಾಗಿರಬೇಕೆಂಬುದು ಭಗವತ್ ಸಂಕಲ್ಪವಾದರೂ, ಮಾನವರು



ತಮ್ಮ ಸ್ವಾರ್ಥದಿಂದ ದುರಾಶೆಗೊಳಗಾಗಿ ಪ್ರಪಂಚವನ್ನು ಶೋಕಮಯವಾಗುವಂತೆ ಮಾಡುತ್ತಾ ಇರುತ್ತಾರೆ. ಸಂತೋಷದಿಂದಿರಬೇಕಾದರೆ ಒಳ್ಳೆಯ ಮನಸ್ಸು ಇರಬೇಕು. ಚಂಚಲ ಗುಣದ ಮನಸ್ಸು ದೃಢಪಟ್ಟು ಒಳ್ಳೆಯತನ ಸಿದ್ಧಿಸುವವರೆಗೆ ಮನುಷ್ಯರು ತಪ್ಪು ಮಾಡುತ್ತ, ಅದಕ್ಕೆ ತಕ್ಕ ಸಂಕಟಗಳನ್ನು ಅನುಭವಿಸುತ್ತ ಗುಣಪಾಠ ಕಲಿಯುತ್ತ ಮುಂದೆ ನಡೆಯಲೇ ಬೇಕಾಗುತ್ತದೆ. ಇದನ್ನು ಮನಸ್ಸಿನಲ್ಲಿಟ್ಟುಕೊಂಡು ನೀನು ಪ್ರಪಂಚವನ್ನು ದರ್ಶಿಸಿ ಬಾರಪ್ಪಾ. ಆದರೆ ಈ ಮೊದಲಿನಂತೆ ಕೆಟ್ಟ ಮಾರ್ಗದಲ್ಲಿ ನಡೆಯುವವರನ್ನು ಒಳ್ಳೆಯ ದಾರಿಗೆ ತಿರುಗಿಸುವ ನಿನ್ನ ಕರ್ತವ್ಯವನ್ನು ಮರೆಯಬೇಡ. ಇದನ್ನು ನಾನು ನಿನಗೆ ಎಚ್ಚರಿಸಬೇಕಾಗಿಯೇ ಇಲ್ಲ. ಅದು ನಿನ್ನ ಸಹಜ ಗುಣವೇ ಆಗಿದೆ. ಇದರೆಡೆಯಲ್ಲಿ ನಿನ್ನ ಅಪೇಕ್ಷೆಯೂ ತೀರುತ್ತದೆ. ಹೋಗಿ ಬಾ ಕಂದಾ" ಎಂದನು ಸದಾನಂದ ಮುನಿ.

ಅಪೂರ್ವನು ಮಹಾಮುನಿಗೆ ಭಕ್ತಿಯಿಂದ ನಮಸ್ಕಾರ ಮಾಡಿ ಮತ್ತೆ ಮೈದಾನ ಪ್ರಾಂತ್ಯದಲ್ಲಿ ಓಡತೊಡಗಿ ವೇಗವನ್ನು ಹೆಚ್ಚಿಸಿಕೊಳ್ಳುತ್ತಾ ಅದೃಶ್ಯನಾಗಿ ಹೋದನು.

* * *

ಸಾಯಂಕಾಲವಾಗಿ ಕತ್ತಲೆ ಬೀಳುವ ಸಮಯದಲ್ಲಿ ಅಪೂರ್ವನ ಕಣ್ಣಿಗೆ ಪ್ರಪಂಚದಲ್ಲಿ ಒಂದರ ಮೇಲೊಂದಾಗಿ ಬೆಳಗತೊಡಗಿದ ದೀಪದ ಕಾಂತಿಗಳು ಅವನ ದೃಷ್ಟಿಯನ್ನು ಆಕರ್ಷಣೆಯನ್ನುಂಟು ಮಾಡಿದುವು. ಅವನೀಗ ರತ್ನಪುರಿ ರಾಜಧಾನಿಯ ಮೇಲ್ಭಾಗಕ್ಕೆ ಬಂದಿದ್ದನು. ಬಹು ವಿಶಾಲವಾದ ಪ್ರಧಾನ ಬೀದಿಯಲ್ಲಿ ಪ್ರಜೆಗಳು ಯಾಕೋ ಗುಂಪುಗೂಡಿಕೊಂಡಿದ್ದರು.

ಅಪೂರ್ವನು ವೇಗ ತಗ್ಗಿಸಿ ಮೆಲ್ಲನೆ ಜಾರುತ್ತ ಜನರ ಮಧ್ಯದಲ್ಲಿಳಿದು ನಿಂತನು. ಸಣ್ಣ ಕುಳ್ಳಗಿನ ಆ ಬೋಂಟೆ ಮಾನವನನ್ನು ಬೇರೊಂದು ಆಕರ್ಷಣೆಯಿಂದಾಗಿ ಯಾರೂ ಗಮನಿಸಲಿಲ್ಲ.

ಇಬ್ಬರು ರಾಜಭಟರು ಡಂಗುರವನ್ನು ಡಮಡಮಿಸುತ್ತ ಅಲ್ಲಲ್ಲಿ ನಿಂತು, "ರತ್ನಪುರಿಯ ನಿವಾಸಿಗಳೆಲ್ಲಾ ಕೇಳಿರೋಯ್! ಮುಖ್ಯ ಪ್ರಕಟನೆ ಗಮನಿಸಿರೋಯ್! ಮಹಾರಾಜರ ಏಕೈಕ ಕುಮಾರಿಯಾಗಿರುವವಳು ಸ್ವಲ್ಪ ಕಾಲದಿಂದ ರೋಗಗ್ರಸ್ಥಳಾಗಿರುವ ಸಂಗತಿ ನಿಮಗೆಲ್ಲಾ ಗೊತ್ತಿದೆಯಷ್ಟೇ? ರಾಜವೈದ್ಯರು ಎಷ್ಟೇ ಚಿಕಿತ್ಸೆ ಮಾಡಿದರೂ ವ್ಯಾಧಿ ಹೆಚ್ಚಾಯಿತೇ ಹೊರತು ಗುಣವಾಗಲಿಲ್ಲ. ಆದುದರಿಂದ ನಿಮ್ಮೆಲ್ಲರ ಯುವರಾಣಿಯ ರೋಗವನ್ನು ಯಾರು ಗುಣಪಡಿಸುವರೋ ಅವರ ತೂಕದಷ್ಟು ಎತ್ತರದ ಬಂಗಾರದ ರಾಶಿಯಿಂದ ಸತ್ಕರಿಸುತ್ತೇವೆಂದು ಮಹಾರಾಜರು ತಿಳಿಯಪಡಿಸುತ್ತಾರೆ! ಕೇಳಿರೋ! ಕೇಳಿರೀ!" ಎಂದು ಡಂಗುರದವರು ಸಾರಿಕೊಂಡಿದ್ದರು.

ಆ ಡಂಗುರವನ್ನು ಕೇಳಿದ ಜನರು ತಮ್ಮೊಳಗೆ ತಾವು ಏನೇನೋ ಮಾತಾಡಿಕೊಳ್ಳುತ್ತ, ಮತ್ತೆ ಕೆಲವರು ವಿಷಾದದ ಮುಖ ಮಾಡಿಕೊಂಡು ಮೌನ ಮುದ್ರೆಯಲ್ಲಿ ತಮ್ಮ ಮನೆಗಳಿಗೆ ಹೊರಟು ಹೋಗುತ್ತಿದ್ದರು. ಹಾಗೆ ಜನರ ಗುಂಪು ತಗ್ಗುತ್ತಾ ಹೋದರೂ, ವಿಚಿತ್ರ ವೇಷಗಳಿಂದಿರುವ ಇಬ್ಬರು ಮಾತ್ರ ಬಹಳವಾಗಿ ಆಸ್ಥೆಪಟ್ಟು ನಿಂತು ನಿಂತು ಡಂಗುರದವನನ್ನು ಅನುಸರಿಸುತ್ತಿದ್ದರು.

ಆ ಇಬ್ಬರಲ್ಲಿ ತುಸು ಉದ್ದವಾಗಿರುವವನು "ಈ ಡಂಗುರಕ್ಕಾಗಿಯೇ ನಾನು ಇದುವರೆಗೂ ಕಾದಿದ್ದೆನು" ಎಂದನು ನುಗಮೊಗದಿಂದ. ಅವನಿಗೆ ಮೊನಚಾಗಿ ಕೆಳಗಿಳಿದ ನೀಳವಾದ ಗಡ್ಡವಿತ್ತು. ಸಂತೋಷದಿಂದ ಗಡ್ಡವನ್ನು ನೀವಿಕೊಂಡನು. ಅವನು ಕರ್ರಗಿನ ಬಟ್ಟೆಯನ್ನು ಮುಂಡಾಸು ಸುತ್ತಿಕೊಂಡಿದ್ದನು. ಅವನ ಕಣ್ಣುಗಳು ನಾಗರಹಾವಿನ ಕಣ್ಣುಗಳ ಹಾಗೆ ಹೊಳೆಯುತ್ತಿದ್ದುವು.

"ಸ್ವಾಮಿ, ರಾಜಕುಮಾರಿಯ ರೋಗವನ್ನು ಗುಣಪಡಿಸಲು ಹೋಗುವ ಮೊದಲು ಹೊಟ್ಟೆ ತುಂಬಾ ಕುತ್ತಿಗೆಗುಳಿಯವರೆಗೂ ಊಟಮಾಡಿ ಉಸಿರು ಬಿಗಿದುಕೊಂಡು ಹೋಗಿರಿ. ಎಷ್ಟು ಹೆಚ್ಚು ಭಾರವಿದ್ದರೆ ಅಷ್ಟು ಹೆಚ್ಚು ಬಂಗಾರ ನಮ್ಮದಾಗುತ್ತದೆ. ಅಲ್ಲವೇ! ಹೀಗೆ ಸಿದ್ಧತೆ ಮೊದಲೇ ಮಾಡುವುದು ಒಳ್ಳೇದಲ್ಲವೆ? ಹೇಗಿದೆ ನನ್ನ ಆಲೋಚನೆ?" ಎಂದನು ಅವನೊಂದಿಗಿದ್ದ ದಪ್ಪದ ಗಿಡ್ಡ ಮನುಷ್ಯ. ಅವನಿಗೆ ವಿಶೇಷವಾಗಿ ದೊಡ್ಡ ಮೀಸೆಗಳಿದ್ದುವು.

"ಬ್ರಹ್ಮಾಂಡವಾಗಿದೆ ನಿನ್ನ ಆಲೋಚನೆ ಕುಂಭಾಂಡಾ! ಅಲ್ಲವೆಂದು ಹೇಳಲಾರೆನು. ಆದರೆ ನಿನ್ನ ಈ ಗುರುವಾದ ಸರ್ಪಕೇತು ಮಹಾ ಮಾಂತ್ರಿಕನು ನಿನಗಿಂತಲೂ ಬುದ್ಧಿವಂತನಾಗಿದ್ದಾನೆ. ಕೇವಲ ಬಂಗಾರಕ್ಕಾಗಿಯೇ ನಾನು ಈ ಪಥಕ



ಹಾಕಿದ್ದೇನೆಂದುಕೊಂಡಿರುವಿಯಾ? ಮೂಢಾ!" ಎಂದನು ಸರ್ಪಕೇತು ಹೆಮ್ಮೆಯ ನಗುವಿನಿಂದ.

"ಹಾಗಾದರೆ ಮತ್ತೇಕೆ ಗುರುವೇ?" ಎಂದು ಕೇಳಿದನು ಕುಂಭಾಂಡ. "ನಿನ್ನ ಈ ಗುರು ರಾಜ್ಯಕ್ಕೇ ಗುರುವಾಗಲಿದ್ದಾನೆ! ಈಗಾದರೂ ತಿಳಿಯಿತೇನೋ?" ಎಂದನು ಸರ್ಪಕೇತು.

"ಓಹೋ! ಪ್ರಜೆಗಳೆಲ್ಲರೂ ತಮ್ಮ ಶಿಷ್ಯರಾಗುವರೆಂದು ಅನ್ನಿ!" ಎಂದನು ಕುಂಭಾಂಡ.

"ಶತಮೂರ್ಖಾ! ಛೀ! ಇಷ್ಟೇನಾ ನಿನ್ನ ತಿಳುವಳಿಕೆ? ನನ್ನ ಶಿಷ್ಯ ನೀನೊಬ್ಬನೇ ಕಣೋ. ಈ ರಾಜ್ಯದ ಪ್ರಜೆಗಳೆಲ್ಲರೂ ನನ್ನ ಪ್ರಜೆಗಳಾಗಿಬಿಡುತ್ತಾರೆ. ಅಂದರೆ ನನ್ನಿಂದ ಪಾಲಿಸಲ್ಪಡುತ್ತಾರೆ! ಅರ್ಥವಾಯಿತೇನೋ ಮರಮಂಡೆಯುವನೇ?" ಎಂದನು ಸರ್ಪಕೇತು.

ಅರ್ಥವಾಗಲಿಲ್ಲವೆಂಬಂತೆ "ಅಂದರೇ...ಅಂದರೇ..." ಎನ್ನುತ್ತಾ ತಲೆ ಕೆರೆದುಕೊಂಡನು ಕುಂಭಾಂಡ.



"ಓಹೋ ! ತಿನ್ನುವುದೊಂದೇ ಅರ್ಥವಾಗುವುದು ನಿನಗೆ. ಈಗ ಅರ್ಥಮಾಡಿಕೋ. ಈ ರಾಜನಿಗೆ ಒಬ್ಬಳೇ ಮಗಳಾಗಿರುವವಳು ಯುವರಾಣಿ ಹೌದಾ ?" ಎನ್ನಲು ಕುಂಭಾಂಡನು "ಹೌದು ಸ್ವಾಮಿ ಹೌದು" ಎಂದನು ಕುಂಭಾಂಡ.

"ರಾಜನು ನನ್ನನ್ನು ಅಳಿಯನಾಗಿ ಸ್ವೀಕರಿಸುತ್ತೇನೆಂದರೆ ಮಾತ್ರವೇ ನಾನು ಯುವರಾಣಿಯ ವ್ಯಾಧಿಯನ್ನು ಗುಣಪಡಿಸುತ್ತೇನೆಂದು ಮಾತು ಕೊಡುತ್ತೇನೆ. ಯುವರಾಣಿಯನ್ನು ಮದುವೆ ಮಾಡಿಕೊಂಡರೆ ನಾನೇ ಅಲ್ಲವೇ ರತ್ನಪುರಿಯ ಸಿಂಹಾಸನದ ವಾರಸುದಾರ ?" ಎಂದು ಗಹಗಹಿಸಿ ನಗತೊಡಗಿದನು ಸರ್ಪಕೇತು.

"ಆಹಾಹಾ ? ಓಹೋಹೋ ? ಬಹು ದೊಡ್ಡ ಆಲೋಚನೆ ನಿಮ್ಮದು. ಅದಕ್ಕೇ ಅವಳಿಗೆ ರೋಗದ ಮಂತ್ರಗಾಳಿ ಊದಿದಿರಾ ?" ಎಂದನು ಕುಂಭಾಂಡ ಅಮಿತಾಶ್ಚರ್ಯದಿಂದ.

"ಈಗಾದರೂ ತಿಳಿಯಿತೋ. ದೊಡ್ಡವರಿಗೆ ಯಾವಾಗಲೂ ದೊಡ್ಡ ದೊಡ್ಡ ಆಲೋಚನೆಗಳೇ ಬರುತ್ತವೆ. ಈಗ ನನ್ನ ಮಾತು ಜಾಗರೂಕತೆಯಿಂದ ಕೇಳು. ಈ ವಿಷಯದಲ್ಲಿ ರಾಜನೊಂದಿಗೆ ನಾನು ವಿವಾದಕ್ಕೆ ಹೋಗುವುದಿಲ್ಲ. ನನ್ನ ಬೆಲೆ ಇಳಿಸುವ ಮಾತು ಹೇಳಲಾರೆನು. ಅದನ್ನೆಲ್ಲಾ ಉಪಾಯದಿಂದಲೇ ಸಾಧಿಸಬೇಕು. ನೀನು ಹೋಗಿ ರಾಜನ ದರ್ಶನ ಮಾಡಿ ಮಾನವರ ಸಂಕಷ್ಟಗಳನ್ನು ನಿವಾರಿಸುವ ದಿವ್ಯ ವಟವೃಕ್ಷವೊಂದು ಅರಣ್ಯದಲ್ಲಿರುವುದೆಂದು ಹೇಳು. ನಾಳೆ ಅರ್ಧ ರಾತ್ರಿಯ ವೇಳೆಯಲ್ಲಿ ರಾಜನು ಅರಣ್ಯಕ್ಕೆ ಬರಬೇಕು. ನಾನು ಹೇಳುವ ವಟವೃಕ್ಷವು ಅರಣ್ಯದಲ್ಲಿ ಎಲ್ಲಿರುವುದೆಂದು ನಿನಗೆ ಗೊತ್ತಿದೆಯಷ್ಟೇ ?" ಎಂದನು ಸರ್ಪಕೇತು.

"ಗೊತ್ತಿದೆ ಸ್ವಾಮಿ, ಗೊತ್ತಿದೆ. ಅರಣ್ಯದಲ್ಲಿರುವ ನದಿಯ ತೀರದಲ್ಲಿ ಒಂದು ಕಡೆ ದೊಡ್ಡ ಹುತ್ತವೂ ಮತ್ತೊಂದು ಕಡೆ ಪಾಳುಬಿದ್ದ ಶಿಥಿಲಾಲಯವೂ ಇವುಗಳ ನಡುವೆ ಇರುವ ಆ ವಟವೃಕ್ಷ ತಾನೇ ?" ಎಂದನು ಕುಂಭಾಂಡ.

"ಅಷ್ಟೇನಾ ನಿನ್ನ ನೆನಪು !" ಎಂದು ಸರ್ಪಕೇತು ಅಡ್ಡಗಣ್ಣಿನಿಂದ ಚುಚ್ಚುವಂತೆ ನೋಡಲು ಕುಂಭಾಂಡನು "ನೆನಪಾಯಿತು ಗುರೂ ! ನೀವು ಒಂದುಸಾರಿ ಆ ವಟವೃಕ್ಷದ ಮೇಲಿರುವ ಪೊಟರೆಯೊಳಗೆ ಅಡಗಿಕೊಂಡು ಒಬ್ಬ ವ್ಯಾಪಾರಿಯನ್ನು ಹೆದರಿಸಿ ಬೀಳಿಸಿದಿರಿ ! ಅವನು ಹಣದ ಮೂಟೆಯನ್ನು ಅಲ್ಲೇ ಬಿಟ್ಟು ಬದುಕಿದರೆ ಸಾಕೆಂದು ಓಡಿಹೋದ !" ಎಂದನು ಕುಂಭಾಂಡ.

"ಪರ್ವಾಗಿಲ್ಲ. ನೆನಪಿಟ್ಟುಕೊಂಡಿರುವಿ. ಆ ವೃಕ್ಷವು ಎಲ್ಲಿರುವುದೆಂದು ರಾಜನೊಂದಿಗೆ ವಿವರಿಸಿ ದಾರಿ ತಿಳಿಯುವ ಹಾಗೆ ಹೇಳು. ಆಮೇಲೆ ನೀನು ರಾಜನಿಗಿಂತ ಮೊದಲೇ ಅಡ್ಡದಾರಿಯಿಂದ, ಅದೂ ಇದೂ

ತಿನ್ನುತ್ತ ಹೊತ್ತು ಕಳೆಯದೆ ಬಂದು, ವಟವೃಕ್ಷದ ಪೊಟರೆಯಲ್ಲಿ ಅಡಗಿ ಕೂತುಕೋ. ರಾಜನು ಬಂದು ವೃಕ್ಷಕ್ಕೆ ನಮಸ್ಕಾರ ಮಾಡಿ ತನ್ನ ಸಂಕಟವನ್ನು ಹೇಳುತ್ತಾನೆ. ಆಗ ನೀನು ಗಂಭೀರವಾದ ಕಂಠ ಸ್ವರದಲ್ಲಿ ರಾಜನಿಗೆ ಸಲಹೆಯ ಮಾತು ಹೇಳಬೇಕು" ಎಂದನು ಸರ್ಪಕೇತು.

"ಆ ಮಾತು ಅಪ್ಪಣೆಯಾಗಲಿ ಗುರುವರ್ಯಾ!" ಎಂದನು ಕುಂಭಾಂಡ.

"ಹತ್ತಿರದಲ್ಲಿ ಕಾಣುವ ಆ ಶಿಥಿಲಾಲಯದಲ್ಲಿ ಒಬ್ಬ ಪವಿತ್ರ ಸಾಧು ವಾಸವಾಗಿದ್ದಾನೆ. ನಿನ್ನ ರೋಗಗ್ರಸ್ಥಳಾದ ಕುಮಾರಿಯನ್ನು ಆ ಮಹಾ ಸಾಧುವಿಗೆ ಕೊಟ್ಟು ವಿವಾಹ ಮಾಡಿದರೆ ಅವಳ ವ್ಯಾಧಿ ಹೇಳ ಹೆಸರಿಲ್ಲದೆ ಹೋಗುತ್ತದೆ. ಆ ಮಹಾ ಪುರುಷನು ಮಾತ್ರವೇ ನಿನ್ನ ಕುಮಾರಿಯ ರೋಗ ವನ್ನು ಪರಿಹರಿಸುತ್ತಾನೆ. ಇಲ್ಲದಿದ್ದರೆ ನಿನ್ನ ಮಗಳು ಬಹು ಬೇಗದಲ್ಲಿ ಸಾಯುವುದು ಖಂಡಿತ! ಎಂದು ಹೇಳು. ಆ ಮಾತುಗಳನ್ನು ಕೇಳಿ ನಂಬಿದ ರಾಜನು ನನ್ನ ಹತ್ತಿರ ಬಂದು ನನ್ನನ್ನು ರಾಜಧಾನಿಗೆ ಕರೆದುಕೊಂಡು ಹೋಗುತ್ತಾನೆ. ರಾಜಭವನದಲ್ಲಿ ನಾನು ಯುವರಾಣಿಯನ್ನು ಮದುವೆಯಾಗಿ ಬಿಡುತ್ತೇನೆ. ಮತ್ತೇನಿದೆ? ಕೂಡಲೇ ಅವಳ ವ್ಯಾಧಿಯನ್ನೂ ಗುಣಪಡಿಸುತ್ತೇನೆ" ಎಂದು ನಕ್ಕನು ಸರ್ಪಕೇತು.

"ಗುರುವೇ! ನಿಮ್ಮ ರೋಗ ಮಂತ್ರದ ನಿವಾರಣೆಗೆ ಬೆಳಿಗ್ಗೆ ತುಲಸೀ ದಳಗಳ ರಸ ಮತ್ತು ಸಾಯಂಕಾಲದಲ್ಲಿ ಬಿಲ್ವ ದಳಗಳ ರಸ. ಇಷ್ಟಿಷ್ಟು ದಿನಾ ತೆಗೆದು ಸೇವಿಸಿದರೆ ಯುವರಾಣಿಯ ರೋಗ ಗುಣವಾಗುತ್ತದೆಂದು ತಾನೇ ತಾವು ಹೇಳಿದಿರಿ? ನಾನು ನಿಮ್ಮ ಶಿಷ್ಯನಾಗಿ ಹೋಗಿ ಆ ಸಣ್ಣ ಕೆಲಸ ಮಾಡಲಾರೆನೆಂದುಕೊಳ್ಳುವಿರಾ? ರೋಗ ಗುಣವಾದ ಮೇಲೆ ಮದುಮಗಳ ಸಿಂಗಾರದೊಂದಿಗೆ ಬಹು




ವೈಭವದಿಂದ ರಾಜಕುಟುಂಬದವರಿಗೂ, ಪ್ರಜೆ ಗಳಿಗೂ ತಿಳಿಯುವಂತೆ ಅವಳನ್ನು ಮದುವೆಯಾಗ ಬಹುದಷ್ಟೆ? ಆದರಿಂದ ನಾವಿಬ್ಬರು ಕೂಡಾ ರಾಜಕುಟುಂಬದ ಸಂಬಂಧಗಳನ್ನು ಏರ್ಪಡಿಸಿಕೊಳ್ಳ ಬಹುದಷ್ಟೇ?" ಎಂದನು ಕುಂಭಾಂಡ.

"ಆಶೆಗಳನ್ನು ಹಾಗೆಲ್ಲಾ ದೊಡ್ಡ ದೊಡ್ಡದಾಗಿ ಬೆಳೆಯಲು ಬಿಡಬಾರದೋ ಶಿಷ್ಯಾ. ಹೇಗೂ ನಾನು ರಾಜನಾದ ಮೇಲೆ ನಿನ್ನನ್ನು..." ಎಂದು ಸರ್ಪ ಕೇತು ಹೇಳಿ ಮುಗಿಸುವುದರೊಳಗೆ "ಮಂತ್ರಿಯನ್ನಾಗಿ ಮಾಡುವಿರಿ! ನನಗೆ ಗೊತ್ತು ಮಹಾಗುರೂ!" ಎಂದನು ಕುಂಭಾಂಡ.

"ಬರೀ ಮಂತ್ರಿಯಲ್ಲ. ಅಂತರಂಗದ ಸಲಹಾ ದಾರನಾಗಿ ಮಾಡುತ್ತೇನೆಂದುದನ್ನು ಮರೆತೆಯಾ? ಅದು ಸಾಮಾನ್ಯವೆಂದುಕೊಳ್ಳಬೇಡ" ಎಂದನು ಸರ್ಪಕೇತು. ಕುಂಭಾಂಡನು ಏನೋ ವಿಚಾರದಿಂದ ತಲೆ ಬಗ್ಗಿಸಿಕೊಂಡನು.



"ಹುಂ–ಹೋಗಿ ಹೇಳಿದ ಕೆಲಸ ಮಾಡಿ ಬಾ. ಹೊರಡು ರಾಜಭವನಕ್ಕೆ" ಎಂದು ಹೇಳಿ ಅವನನ್ನು ಅಲ್ಲಿಂದ ಹೊರಡಿಸಿ, ಸರ್ಪಕೇತು ಕೂಡಲೇ ಅರಣ್ಯದ ಕಡೆಗೆ ಹೊರಟನು.

ಅತ್ಯಂತ ಸೂಕ್ಷ್ಮಕರ್ಣಗ್ರಹಣ ಶಕ್ತಿಯುಳ್ಳ ಅಪೂರ್ವನಿಗೆ ಅವರ ಮಾತುಗಳನ್ನು ಕೇಳಿ ಆಗ್ರಹ ವೆದ್ದಿತು. ಸರ್ಪಕೇತು ಮಂತ್ರಪ್ರಭಾವದಿಂದ ಯುವ ರಾಣಿಯನ್ನು ರೋಗಗ್ರಸ್ಥಳಾಗುವಂತೆ ಮಾಡಿ, ಈಗ ಆ ವ್ಯಾಧಿಯನ್ನು ಗುಣಪಡಿಸುವ ನೆಪನದಲ್ಲಿ ಅವಳನ್ನು ಮದುವೆಯಾಗಿ ರಾಜ ಕಾರ್ಯಗಳನ್ನು ಕೈಗೊಳ್ಳಬೇಕೆಂದು ನೋಡುತ್ತಿದ್ದಾನೆ !

ಅಪೂರ್ವನು ಸರ್ಪಕೇತುವನ್ನು ಅನುಸರಿಸಿಕೊಂಡು ಹೊರಟನು. ಸರ್ಪಕೇತು ಹೇಳಿದ ಅರಣ್ಯವೂ, ವಟವೃಕ್ಷ, ಹುತ್ತ, ಆಲಯಗಳು ಬಹಳ ದೂರವೇನೂ ಇರಲಿಲ್ಲ. ಸರ್ಪಕೇತು ಶಿಥಿಲಾಲಯದಲ್ಲಿ ಮಾನವ ಕಪಾಲಗಳನ್ನೂ, ಬಗೆಬಗೆಯ ಪ್ರಾಣಿಗಳ ಚರ್ಮಗಳನ್ನೂ ಬಣ್ಣ ಬಣ್ಣಗಳ ವಸ್ತುಗಳನ್ನೂ ಭದ್ರವಾಗಿ ಅಡಗಿಸಿಕೊಂಡನು.

ರಾತ್ರಿ ಮೊದಲನೇ ಜಾವು ಕಳೆದ ಮೇಲೆ ಕುಂಭಾಂಡನು ಅಲ್ಲಿಗೆ ಬಂದು "ಸ್ವಾಮಿ, ನೀವು ಆಜ್ಞಾಪಿಸಿದ ವಿಧವಾಗಿ ರಾಜನೊಂದಿಗೆ ಹೇಳಿದೆನು. ನಾಳೆ ನಡುರಾತ್ರಿಯ ಹೊತ್ತಿಗೆ ಮಹಾರಾಜನು ಒಬ್ಬನೇ ಈ ಮರದ ಹತ್ತಿರ ಬರುತ್ತಾನೆ" ಎಂದನು.

"ಶಾಭಾಸ್ ! ಬಹಳ ಸಂತೋಷ. ನೀನು ಮರದ ಪೊಟರೆಯಲ್ಲಿ ಕುಳಿತು, ರಾಜನೊಂದಿಗೆ ಏನು ಹೇಳಬೇಕೆಂಬುದನ್ನು ಜಪಿಸಿಕೊಂಡು ಮನನ ಮಾಡಿಕೋ. ನಾನು ಹೇಳಿದ್ದಕ್ಕಿಂತ ಒಂದು ಮಾತು ಹೆಚ್ಚಾಗಲೀ, ಕಡಿಮೆಯಾಗಲೀ ಆಗಕೂಡದು. ಜಾಗ್ರತೆ !" ಎಂದನು ಸರ್ಪಕೇತು.

ಕುಂಭಾಂಡನು ಸರಿಯೆಂಬಂತೆ ತಲೆಯಾಡಿಸಿದನು. ಅಮಾವಾಸ್ಯೆಯ ರಾತ್ರಿಯಲ್ಲಿ ಆಕಾಶವು ಮೇಘಾವೃತ ವಾಗಿದ್ದುದರಿಂದ ಎಲ್ಲೆಲ್ಲಿಯೂ ಅಂಧಕಾರವು ಕವಿದಿತ್ತು. ರಾಜನು ಅಂಗರಕ್ಷಕರನ್ನು ದೂರದಲ್ಲಿ ನಿಲ್ಲಿಸಿ, ಅರಣ್ಯ ದೊಳಗಿನ ವಟವೃಕ್ಷದ ಕಡೆಗೆ ಕುದುರೆಯ ಮೇಲೇರಿ ಕೊಂಡು ಸಾಗತೊಡಗಿದನು.

ಅಪೂರ್ವನು ಅದಕ್ಕೆ ಮೊದಲೇ ಮರದ ಮೇಲೆ ಹತ್ತಿ ಕೂತಿದ್ದನು.

ರಾಜನ ಬರುವಿಕೆಗೆ ಒಂದು ಗಂಟೆಯ ಮೊದಲು ಸರ್ಪಕೇತು ಕುಂಭಾಂಡನೊಂದಿಗೆ, ರಾಜನು ಬಂದ ಕೂಡಲೇ ಏನು ಮಾಡಬೇಕೆಂಬುದನ್ನು ಹೇಳಿದನು. ಕುಂಭಾಂಡನು ವಟವೃಕ್ಷವನ್ನೇರಿ ಅದರ ಪೊಟರೆ ಯಲ್ಲಿ ಕುಳಿತುಕೊಂಡ ಮೇಲೆ ಸರ್ಪಕೇತು ಶಿಥಿಲಾ ಲಯದೊಳಗೆ ಹೋದನು.

ರಾಜನು ಕುದುರೆಯಿಂದಿಳಿದು ವಟವೃಕ್ಷವನ್ನು ಸಮೀಪಿಸಿ, ವೃಕ್ಷದ ಮುಂದೆ ಮುಂಡುಗಾಲೂರಿ ಕುಳಿತು ಕೈಮುಗಿದು ತನ್ನ ಕುಮಾರಿಯ ರೋಗದ

ಸಮಾಚಾರ ಹೇಳಿ, "ಹೇ, ಪವಿತ್ರ ವಟವೃಕ್ಷವೇ! ನನ್ನ ಮೇಲೆ ದಯೆ ತೋರಿಸಿ ನನ್ನ ಕುಮಾರಿಯ ವ್ಯಾಧಿ ಗುಣವಾಗುವ ದಾರಿ ಹೇಳು!" ಎಂದು ಪ್ರಾರ್ಥನೆ ಮಾಡಿದನು.

"ರಾಜಾ, ನಿನಗೆ ನಾನು ಕರುಣಿಸುತ್ತಿದ್ದೇನೆ!" ಎಂದನು ಪೊಟರೆಯೊಳಗಿದ್ದ ಕುಂಭಾಂಡ ಗಂಭೀರ ಸ್ವರದಿಂದ.

"ಧನ್ಯನಾದೆನು! ನನ್ನ ಕಂದಮ್ಮನ ರೋಗ ಗುಣವಾಗುವ ಮಾರ್ಗವೇನು ಮಹಾತ್ಮಾ?" ಎಂದನು ರಾಜ.

"ಪಕ್ಕದಲ್ಲಿರುವ ಶಿಥಿಲಾಲಯಕ್ಕೆ ಹೋಗು. ಅಲ್ಲಿ ಒಬ್ಬ ಮಾಂತ್ರಿಕನಿದ್ದಾನೆ. ಆ ನೀಚನೇ ನಿನ್ನ ಕುಮಾರಿಗೆ ಆರೋಗ್ಯ ಕೆಡುವ ಹಾಗೆ ಮಾಡಿದ್ದಾನೆ. ಅವಳ ರೋಗಕ್ಕೆ ಅವನೇ ಕಾರಣ. ಅವನು ಮಂತ್ರೋಚ್ಚಾರಣೆ ಮಾಡಲು ಸಾಧ್ಯವಾಗದಂತೆ ಮೊದಲು ಅವನ ಬಾಯಿಯನ್ನು ಮುಚ್ಚಿ ಶಿರವನ್ನು ಕಡಿದುಬಿಡು. ಆದರಿಂದ ಯುವರಾಣಿಯ ವ್ಯಾಧಿ ಅರ್ಧದಷ್ಟು ಗುಣವಾಗುತ್ತದೆ.

ಕುಂಭಾಂಡನ ಬಾಯಿಯಿಂದ ಹೊರಬಿದ್ದ ಆ ಮಾತುಗಳನ್ನು ಕೇಳಿ ಅಪೂರ್ವನಿಗೆ ಅತ್ಯಾಶ್ಚರ್ಯ ವಾಯಿತು. ದುಷ್ಟನಾದ ಮಾಂತ್ರಿಕನಿಗೆ ತಕ್ಕ ಹಾಗೆ ಅವನಿಗಿಂತ ದುಷ್ಟ ಶಿಷ್ಯ! ತನ್ನ ದ್ರೋಹ ಕಾರ್ಯ ಹೊರಬೀಳಲು ಅವಕಾಶವಿಲ್ಲದಂತೆ ಸರ್ಪಕೇತುವಿನ ಬಾಯಿಯನ್ನು ಮುಚ್ಚಲು ಹೇಳುವ ಕುಂಭಾಂಡನು ನಿಜಕ್ಕೂ ಬುದ್ಧಿವಂತನೇ ಎಂದು ತೋರಿತು ಅಪೂರ್ವನಿಗೆ!

ರಾಜನು ವೃಕ್ಷಕ್ಕೆ ಮೂರನೇ ಸಾರಿಯಾಗಿ ನಮಸ್ಕಾರ ಮಾಡಿ, "ಹೇ, ದಿವ್ಯ ವೃಕ್ಷವೇ! ಧನ್ಯ ವಾದಗಳು! ದಯಮಾಡಿ ನನ್ನ ಕುಮಾರಿಯ ಉಳಿದ ಅರ್ಧ ರೋಗವು ಪರಿಹಾರವಾಗುವ ಹಾಗೆ ಮತ್ತೇನು ಮಾಡಲಿ? ಕರುಣೆಯಿಟ್ಟು ಹೇಳು



ತಾಯೇ! ತಂದೆಯೂ ನೀನೇ, ತಾಯಿಯೂ ನೀನೇ!" ಎಂದು ಪ್ರಾರ್ಥಿಸಿದನು.

ಈಗ ಕುಂಭಾಂಡನು ಏನು ಹೇಳುವನೆಂಬುದನ್ನು ಅತ್ಯಾಸಕ್ತಿಯಿಂದ ಆಲಿಸಿದನು ಅಪೂರ್ವ.

"ಕೇಳು ರಾಜಾ, ನಾಳೆ ಬೆಳಗಾಗುವ ಸಮಯ ದಲ್ಲಿ ನಿಮ್ಮ ರಾಜಭವನದ ಪೂರ್ವ ದ್ವಾರದ ಸಮೀಪದಲ್ಲಿ ಒಬ್ಬ ಯುವಕನು ಕಾಣುತ್ತಾನೆ. ಅವನು ಸ್ವಲ್ಪ ಗಿಡ್ಡನಾದರೂ ಗಂಭೀರವಾದ ದೊಡ್ಡ ಕೋರೆ ಮೀಸೆಗಳಿರುವವನು. ಆ ಯುವಕನನ್ನು ರಾಜಭವನದೊಳಗೆ ಆಹ್ವಾನಿಸಿ, ಯುವರಾಣಿಗೆ ಚಿಕಿತ್ಸೆ ಮಾಡಿಸು. ಅವಳ ವ್ಯಾಧಿಯನ್ನು ಅವನು ಅರ್ಧ ಗುಣಪಡಿಸುತ್ತಾನೆ. ಆದರೆ ಅವಳು ಸಂಪೂರ್ಣ ಗುಣವಾಗಿ ಮೊದಲಿನಂತೆ ಆಗಬೇಕಾದರೆ, ಅವಳಿಗೆ ತಕ್ಕ ಯೋಗ್ಯನೇ ಆದ ಯುವಕನಿಗೆ ಅವಳನ್ನು ಕೊಟ್ಟು ಮದುವೆ ಮಾಡಬೇಕು!" ಎಂದನು ಕುಂಭಾಂಡ.

"ನನ್ನ ಕುಮಾರಿಯ ಪ್ರಾಣ ರಕ್ಷಣೆಯಾಗಲು ಏನು ಬೇಕಾದರೂ ಮಾಡುತ್ತೇನೆ. ಧನ್ಯವಾದಗಳು!" ಎಂದನು ರಾಜ ಮತ್ತೆ ನಮಸ್ಕಾರ ಮಾಡಿ.

"ತಡೆಯಿರಿ ಮಹಾರಾಜಾ! ಆ ಮಾತುಗಳನ್ನು ನಂಬಿ ಮೋಸಹೋಗಬೇಡಿ!" ಎಂದು ಎಚ್ಚರಿಸುತ್ತಾ, ಅಪೂರ್ವನು ಮರದ ಮೇಲಿನಿಂದ ಕೆಳಗೆ ಹಾರಿದನು.

ರಾಜನು ದಿಗ್ಭ್ರಾಂತನಾಗಿ ನೋಡುತ್ತಿದ್ದಂತೆ, ಅಪೂರ್ವನು ಎರಡು ಚಿಕ್ಕ ಕಲ್ಲುಗಳನ್ನು ತೆಗೆದುಕೊಂಡು, ತಿಕ್ಕಿ ಬೆಂಕಿಯ ಕಿಡಿಗಳನ್ನು ಹುಟ್ಟಿಸಿ ಒಣ ಹುಲ್ಲುಗಳ ಮೇಲೆ ಉರಿಹಚ್ಚಿ ಮರದ ಪೊಟರೆಯೊಳಗೆ ಉರಿಯುವ ಬೆಂಕಿಯನ್ನು ತಳ್ಳಿದನು.

ಕೂಡಲೇ ಕುಂಭಾಂಡನು "ಅಯ್ಯಯ್ಯೋ! ಕಾಪಾಡ್ರೋ!" ಎಂದು ಕೂಗುತ್ತಾ, ಪೊಟರೆಯಿಂದ ಕೆಳಗೆ ಹಾರಿಬಿದ್ದನು.

"ಹಿಡಿಯಿರಿ! ಆ ದೊಡ್ಡ ಮೀಸೆಯ ಮಹಾಯೋಗ್ಯನಾದ ಯುವಕನನ್ನು!" ಎಂದು ಆಜ್ಞಾಪಿಸಿದನು ಅಪೂರ್ವ.

ಕುಂಭಾಂಡನು ರಾಜನ ಪಾದಗಳ ಮೇಲೆ ಬಿದ್ದನು.

ಅಷ್ಟರಲ್ಲಿ ಇಲ್ಲಿಯ ಗಲಾಟೆ ಕೇಳಿ ಅಲ್ಲಿಗೆ ಓಡಿ ಬಂದ ರಾಜನ ಅಂಗರಕ್ಷಕರು ಕುಂಭಾಂಡನನ್ನು ಹಿಡಿದು ಹಿಂಗಟ್ಟು ಮುರಿಗಟ್ಟಿದರು.

"ಆ ಶಿಥಿಲಾಲಯದೊಳಗಿರುವ ಕಳ್ಳ ಸಾಧು ವೇಷದ ಮಾಂತ್ರಿಕನನ್ನು ಬಂಧಿಸಿರಿ. ಅವನ ಬಾಯಿ ಮುಚ್ಚುವ ಅಗತ್ಯವಿಲ್ಲ. ಆ ಗುರು ಶಿಷ್ಯರಿಬ್ಬರೂ ಮಾಡಿದ ತಪ್ಪನ್ನು ಒಪ್ಪಿಕೊಳ್ಳುವವರೆಗೂ ಬಾಯಿ ಮುಚ್ಚಬೇಡಿ!" ಎಂದನು ಅಪೂರ್ವ.

"ಅದೆಲ್ಲಾ ಸರಿಯೇ! ಆದರೂ ನನ್ನ ಕುಮಾರಿಯ ರೋಗ ವಾಸಿಯಾಗುವ ದಾರಿ ಹೇಗಯ್ಯಾ, ವಿಗ್ರಹ ರೂಪಾ!" ಎಂದನು ರಾಜ ಅಪೂರ್ವನ ದಿವ್ಯ ಕಾಂತಿಯನ್ನು ನೋಡಿ.

"ಬೆಳಿಗ್ಗೆ ತುಲಸೀ ದಳಗಳ ರಸವನ್ನೂ, ಸಾಯಂಕಾಲದಲ್ಲಿ ಬಿಲ್ವದಳಗಳ ರಸವನ್ನೂ ಕುಡಿಸಿರಿ. ದಿನಾ ಹೀಗೆ ಮಾಡಿದರೆ ಕೆಲವೇ ದಿನಗಳಲ್ಲಿ ನಿಮ್ಮ ಕುಮಾರಿ ಎಂದಿನಂತಾಗುತ್ತಾಳೆ. ಇನ್ನು ಬರುತ್ತೇನೆ!" ಎಂದು ಹೇಳಿದವನೇ ಅಪೂರ್ವನು ಎತ್ತಲೋ ಹಾರೋಡಿ ಮಾಯವಾಗಿ ಹೋದನು.

ರಾಜನು ಭಟರೊಂದಿಗೆ ಕೂಡಿ ಶಿವಾಲಯದ ಹತ್ತಿರ ಹೋದನು. ಅಲ್ಲಿ ಸರ್ಪಕೇತು, ಕೈಗಳು ಹಿಂಗಟ್ಟಲಾಗಿದ್ದ ಕುಂಭಾಂಡನನ್ನು ನೋಡಿದ ಕೂಡಲೇ ತನ್ನ ಪಥಕವು ಇದಿರು ತಿರುಗಿತೆಂದು ಅರಿತು ಮೌನವಾಗಿ ತಲೆ ತಗ್ಗಿಸಿಕೊಂಡನು. ರಾಜಭಟರು ಅವನನ್ನು ಬಂಧಿಸಿ ಶಿಥಿಲಾಲಯದೊಳಗಿನಿಂದ ಅವನನ್ನು ಹೊರಗೆ ಎಳೆದುಕೊಂಡು ಬಂದರು. —(ಆಮೇಲೆ)





# ಅಪೂರ್ವನ ಸಾಹಸ ಯಾತ್ರೆಗಳು

## ೬

[ಸದಾನಂದ ಮುನಿ ಯಜ್ಞದಿಂದ ಸೃಷ್ಟಿಸಿದ ಅದ್ಭುತ ಶಕ್ತಿಗಳಿರುವ ಅಪೂರ್ವನು ಮುನಿಯ ಆಜ್ಞೆಯಂತೆ ಏನೂ ಅರಿಯದ ಬಡ ಪಾಮರರನ್ನೂ ಸಾಧುಗಳನ್ನೂ ದುಷ್ಟರಿಂದ ರಕ್ಷಿಸುವುದರಲ್ಲಿ ನಿರತನಾದನು. ರಾಜ ಕುಮಾರಿಗೆ ದೀರ್ಘ ವ್ಯಾಧಿ ಬರುವಂತೆ ಮಾಡಿ, ಗುಣಪಡಿಸುವ ನೆಪದಲ್ಲಿ ಅವಳನ್ನು ಮದುವೆಯಾಗಲಿದ್ದ ದುಷ್ಟ ಮಾಂತ್ರಿಕನನ್ನು ಶಿಷ್ಯನೊಂದಿಗೆ ರಾಜನಿಗೆ ಹಿಡಿಸಿಕೊಟ್ಟನು ಅಪೂರ್ವ. ಅಪ್ಪಾದ ಮೇಲೆ—]

ಅಪೂರ್ವನು ಎಲ್ಲಿಗೆ ಹೋದನೆಂದರೆ, ಎಲ್ಲರಿಗೂ ಪರಿಚಿತನಾಗಿ ರಾಜಮನ್ನಣೆಗೂ ಪಾತ್ರನಾದ ಸಮೀರನು, ರಾತ್ರಿಯಲ್ಲಿ ಗಾಢ ನಿದ್ರೆಯಲ್ಲಿರುವಾಗ, "ಸಮೀರಾ" ಎಂಬ ಕರೆ ಅವನ ಕಿವಿಯ ಹತ್ತಿರವೇ ಕೇಳಿಸಿತು.

ಎಚ್ಚೆತ್ತ ಸಮೀರನು ತಟ್ಟನೆದ್ದು ಅಪೂರ್ವನನ್ನು ನೋಡಿ ಮಂಚದಿಂದ ಹಾರಿನಿಂತು, ಭಕ್ತಿಯಿಂದ ಅಪೂರ್ವನಿಗೆ ನಮಸ್ಕಾರ ಮಾಡಿದನು.

"ಸಮೀರಾ, ನೀನೊಂದು ಸಣ್ಣ ಸಹಾಯ ಮಾಡಬೇಕು" ಎಂದನು ಅಪೂರ್ವ.

"ದೇವಾಂಶನೇ, ನಿನಗಾಗಿ ಪ್ರಾಣವನ್ನಾದರೂ ಸಂತೋಷದಿಂದ ಕೊಡುತ್ತೇನೆ ಸ್ವಾಮೀ!" ಎಂದನು ಸಮೀರ.

"ಆ ಸಹಾಯ ನನಗಾಗಿ ಅಲ್ಲಪ್ಪಾ. ಐವರು ಹುಡುಗರು ಅಪಾಯದಲ್ಲಿ ಸಿಕ್ಕಿಕೊಂಡಿದ್ದಾರೆ. ಅವರನ್ನು ಕಾಪಾಡಬೇಕಾದ್ದು ಅತ್ಯಗತ್ಯ" ಎಂದನು ಅಪೂರ್ವ.

"ನಿಮ್ಮಾಜ್ಞೆಗೆ ಇದೋ ಸಿದ್ಧನಿದ್ದೇನೆ!" ಎಂದು ಹೇಳಿ ಸಮೀರನು ಹೊರಡಲು ತಯಾರಾದನು. "ಹೆಚ್ಚು ಮಾತು ಹೊತ್ತು ಹಾಳು. ಬಾ ಬಾ




ನನ್ನೊಂದಿಗೆ !" ಎಂದು ಅಪೂರ್ವನು ಸಮೀರನ ಕೈಹಿಡಿದು ಮನೆಯಿಂದ ಹೊರಗೆ ನಡೆದನು. ಸಮೀರನು ಅತ್ಯುತ್ಸಾಹದಿಂದ ಅವನನ್ನು ಅನುಸರಿಸಿದನು. ಅಪೂರ್ವನ ನಡಿಗೆಯ ವೇಗವು ಹೆಚ್ಚು ಹೆಚ್ಚಾಗುತ್ತಿದ್ದಂತೆ ತಾನು ಗಾಳಿಯಲ್ಲಿ ತೇಲಿಹೋಗುವ ಹಾಗೆ ಹಗುರಾಗಿರುವುದು ಗೊತ್ತಾಯಿತು ಸಮೀರನಿಗೆ. ಸ್ವಲ್ಪ ಹೊತ್ತಿಗೆ ಅವರಿಬ್ಬರೂ ಸಮುದ್ರ ತೀರ ಸೇರಿದರು.

ಸಮುದ್ರಕ್ಕೆ ನದಿಯೊಂದು ಸಂಗಮಿಸುವ ಸ್ಥಳದಲ್ಲಿ ಸ್ವಲ್ಪದೂರ ಸಮುದ್ರದಲ್ಲಿ ಹಡಗೊಂದು ಲಂಗರಿಳಿಸಲ್ಪಟ್ಟು ನಿಂತಿರುವುದು ಕಾಣುತ್ತಿತ್ತು.

"ಸಮೀರಾ, ಐದು ಮಂದಿ ಹುಡುಗರು ವಿನೋದ ವಿಹಾರದ ನಿಮಿತ್ತವಾಗಿ ಈಕಡೆಗೆ ಬಂದರು. ದೂರದಲ್ಲಿ ಕಾಣುವ ಹಡಗನ್ನು ನೋಡಿ ಅವರಿಗೆ ಅದರ ಸಮೀಪ ಹೋಗಿ ನೋಡಬೇಕೆಂದು ಕುತೂಹಲ ಬಂತು. ಅವರ ಕುತೂಹಲವನ್ನು ಕಂಡುಹಿಡಿದ ಹಡಗಿನ ಯಜಮಾನ ಸವಿಸವಿ ಮಾತುಗಳಿಂದ ಉಪಾಯವಾಗಿ ಅವರ ಮನಸ್ಸನ್ನು ರಂಜಿಸಿ ಕರೆದುಕೊಂಡು ಹಡಗಿನೊಳಗೆ ಹೋದನು. ಅದರೊಳಗಿನ ಕೋಣೆಗಳನ್ನು, ಅಲ್ಲಲ್ಲಿದ್ದ ವಿಚಿತ್ರ ವಸ್ತುಗಳನ್ನು, ಹಡಗು ನಡೆಸುವ ವಿಧಾನವನ್ನು ಲಂಗರಿಳಿಸುವ ಕ್ರಮವನ್ನು ಹೇಳುತ್ತಾ, ಹೇಳುತ್ತಾ ಹೋದನು. ಎಲ್ಲಾ ಆದ ಮೇಲೆ ತುಂಬಾ ಹೊತ್ತಾಗಿ ಇನ್ನು ಮನೆಗೆ ಹೋಗುತ್ತೇವೆಂದರು ಆ ಹುಡುಗರು. ಆಗ ಹಡಗಿನ ಒಡೆಯ ಅವರಿಗೆ ಸವಿಯಾದ ಪಾನೀಯವನ್ನು ಕುಡಿಯಲು ಕೊಟ್ಟನು. ಅದನ್ನು ಕುಡಿದ ಕೂಡಲೇ ಹುಡುಗರಿಗೆ ಮೈತಿಳಿಯದಂಥ ನಿದ್ದೆ ಬಂತು. ಇನ್ನು ಸ್ವಲ್ಪ ಹೊತ್ತಿಗೆಲ್ಲಾ ಹಡಗು ಹೊರಟುಬಿಡುತ್ತದೆ. ಆ ಹುಡುಗರನ್ನು ದೂರದ ಯಾವುದೋ ದ್ವೀಪಕ್ಕೆ ತೆಗೆದುಕೊಂಡು ಹೋಗಿ, ಗುಲಾಮರಾಗಿ ವಿಕ್ರಯಿಸಬೇಕೆಂದು ಹಡಗಿನ ಯಜಮಾನನ ಪಥಕವಾಗಿದೆ" ಎಂದು ವಿವರಿಸಿದನು ಅಪೂರ್ವ.

"ಇವೆಲ್ಲಾ ನಿಮಗೆ ಹೇಗೆ ಗೊತ್ತಾಯಿತು ?" ಎಂದು ಕೇಳಿದನು ಸಮೀರ.

"ಆ ಹುಡುಗರು ಚಿಕ್ಕ ದೋಣಿಯಲ್ಲಿ ಹಡಗಿಗೆ ಒಯ್ಯಲ್ಪಡುವುದನ್ನು ನೋಡಿದೆನು. ದೋಣಿ ನಡೆಸುವವರ ಮುಖಭಾವದಿಂದ ಹಡಗಿನೊಡೆಯನ ಉದ್ದೇಶ ನನಗೆ ಗೊತ್ತಾಯಿತು. ಅದೆಲ್ಲಾ ಮುನಿಯವರು ನನಗೆ ಅನುಗ್ರಹಿಸಿದ ಶಕ್ತಿ. ರಹಸ್ಯವಾಗಿ ಅವರನ್ನು ಅನುಸರಿಸುವಾಗ ದೋಣಿ ನಡೆಸುವವರ ಮಾತುಗಳಿಂದ ಚೆನ್ನಾಗಿ ಗೊತ್ತಾಯಿತು. ನಾನೂ ಹಡಗಿನೊಳಗೆ ಹೋದೆ" ಎಂದನು ಅಪೂರ್ವ.

"ನೀವು ಆ ಹಡಗಿನೊಳಗೆ ಹೋದದ್ದು ಹೇಗೋ ?" ಎಂದು ಕೇಳಿದನು ಸಮೀರ.

"ಈಗ ನಾವು ಹೇಗೆ ಹೋಗುತ್ತೇವೋ ಹಾಗೇ ಹೋದೆ. ಇನ್ನೀಗ ನಾನು ಮರೆಯಲ್ಲಿದ್ದು ಏನು

ಮಾಡಬೇಕೆಂದು ನಿನಗೆ ಸೂಚಿಸುತ್ತೇನೆ. ನೀನು ಆ ಹುಡುಗರು ಅಲ್ಲಿಂದ ಹೊರಬೀಳುವ ದಾರಿ ಸೂಚಿಸಬೇಕು" ಎಂದನು ಅಪೂರ್ವ.

"ಹೌದು. ನೀವೇನೋ ಮರೆಯಲ್ಲಿರುವಿರಿ. ನಾನು ನಾವಿಕರ ಕಣ್ಣಿಗೆ ಬೀಳದಂತೆ ಹುಡುಗರಿಗೆ ಹೇಗೆ ದಾರಿ ತೋರಿಸಲು ಸಾಧ್ಯ? ಅವರ ಕೈಗೆ ಸಿಕ್ಕಿಬೀಳದಿರುವೆನೆ?" ಎಂದನು ಏನೋ ಅನು ಮಾನಿಸುತ್ತಾ ಸಮೀರ.

"ನಿನಗೆ ಅಂಥಾ ಅನುಮಾನವೇನೂ ಬೇಡ. ನೀನು ಕೂಡಾ ಅಲ್ಲಿ ಸಿಕ್ಕಿಬಿದ್ದ ಹುಡುಗರಲ್ಲಿ ಒಬ್ಬ ನಾಗಿ ಕೂಡಿ ಹೋಗುವಿ. ಹುಡುಗರ ಲೆಕ್ಕದ ವಿಷಯದಲ್ಲಿ ನಾವಿಕರಿಗೆ ಅನುಮಾನ ಬರಬಹುದು. ಆದರೂ ಅದು ಒಂದು ತಮಾಷೆಯಾಗಿಯೇ ಇರುವ ಹಾಗಾಗುತ್ತೆ. ಸರಿ. ನೀನೀಗ ಸಮುದ್ರಯಾನಕ್ಕೆ ಸಿದ್ಧನಾಗಿರುವಿಯಾ?" ಎಂದು ಕೇಳಿದ ಅಪೂರ್ವ.

"ಸಿದ್ಧನಾಗಿದ್ದೇನೆ" ಎಂದನು ಸಮೀರ.

ಕೂಡಲೇ ಅಪೂರ್ವನು ಸಮುದ್ರದ ಕಡೆಗೆ ನೋಡುತ್ತಾ ಸಿಳ್ಳು ಹಾಕಿದನು. ಮರುಕ್ಷಣದಲ್ಲಿ ದೊಡ್ಡ ತೆರೆಯೊಂದು ಅಷ್ಟೆತ್ತರಕ್ಕೆ ಮೇಲೆದ್ದಿತು. ಸಮುದ್ರ ನೀರನ್ನು ಆಕಾಶಕ್ಕೆ ಚಿಮ್ಮಿಸುತ್ತ ಡಾಲ್ಫಿನ್ ಜಾತಿಯ ನಾಲ್ಕು ಗಂಡುಗಲಿಯಂಥ ಮೀನುಗಳು ಎದ್ದು ಹಾರಿ ನೀರಿನಲ್ಲಿ ಈಜುತ್ತಾ ತೀರದ ಕಡೆಗೆ ಬಂದುವು. ಅಪೂರ್ವನು ಸಮೀರನಿಗೆ ಕೈಚಾಚಿದನು. ಇಬ್ಬರೂ ಒಂದೊಂದು ಗಂಡಮೀನಿನ ಮೇಲೇರಿ ದರು. ಆ ಗಂಡಮೀನುಗಳು ಶರವೇಗದಿಂದ ಹಡಗಿನ ಕಡೆಗೆ ಹೊರಟುವು. ಅವುಗಳ ಪ್ರೈಕಾವ ಲಾಗಿ ಮತ್ತೆರಡು ಗಂಡಮೀನುಗಳೂ ಇಬ್ಬದಿಗಳಲ್ಲಿ ಸಾಗಿದುವು.

"ಇಂಥಾ ಗಂಡಮೀನುಗಳನ್ನು ನೀವು ಹೇಗೆ ಪಳಗಿಸಿಕೊಂಡಿರಿ? ನಿಮ್ಮದೆಷ್ಟು ಚಿಕ್ಕ ರೂಪ!" ಎಂದು ಆಶ್ಚರ್ಯದಿಂದ ಕೇಳಿದನು ಸಮೀರ.



"ನಾನೇನೂ ಇವುಗಳನ್ನು ಪಳಗಿಸಲೂ ಇಲ್ಲ, ಯಾವ ವಿದ್ಯೆ ಕಲಿಸಲೂ ಇಲ್ಲ. ಈ ವಿಶ್ವವೆಲ್ಲ ವನ್ನೂ ದಿವ್ಯಾತ್ಮವು ವ್ಯಾಪಿಸಿಕೊಂಡಿದೆ. ಮಾನವ ರಲ್ಲಿಯೂ, ಪ್ರಾಣಿಕೋಟಿ, ಪಕ್ಷಿಕೋಟಿಗಳಲ್ಲಿಯೂ ಆ ದಿವ್ಯಾತ್ಮದ ಅಂಶವು ಸೇರಿಕೊಂಡಿರುತ್ತದೆ. ನಮ್ಮೊಳಗಿನ ಆತ್ಮಾಂಶವನ್ನು ನೆನೆದು ಸಂದೇಶ ವನ್ನು ಕಳುಹಿಸಿಬಿಟ್ಟರೆ, ನಮ್ಮ ಉದ್ದೇಶವು ಒಳ್ಳೆಯ ದಾಗಿದ್ದರೆ ಆ ಪ್ರಾಣಿ ಭಯಬಿಟ್ಟು ನಮ್ಮ ಸಂದೇಶಕ್ಕೆ ಅನುಸಾರವಾಗಿ ನಡೆದುಕೊಳ್ಳುತ್ತದೆ. ನಾವು ತಿಂಡಿ ಯನ್ನು ಕೈಯಲ್ಲಿಟ್ಟುಕೊಂಡು ಏನೂ ಕೆಡುಕು ಮಾಡುವುದಿಲ್ಲವೆಂಬ ನಂಬುಗೆಯುಂಟಾದರೆ ಪ್ರಾಣಿ ಪಕ್ಷಿಗಳು ಅವುಗಳನ್ನು ಎತ್ತಿಕೊಂಡು ತಿನ್ನುವು ದಿಲ್ಲವೆ? ಹಾಗೇನೇ. ಅಂತಹ ಸೂಕ್ಷ್ಮಾಂಶದ ಮೂಲಕವಾಗಿಯೇ ನಾನು ಆ ಗಂಡಮೀನುಗಳಿಗೆ ಆದೇಶ ಕೊಟ್ಟೆನು" ಎಂದು ವಿವರಿಸಿ ಹೇಳಿದನು ಅಪೂರ್ವ.




"ಹಾಗೇನು ? ಹಾಗಾದರೆ ಮಾನವರ ಹೃದಯದಲ್ಲಿ ಕೂಡಾ ನೀವು ಸಹಕಾರ ಭಾವನೆ ಹುಟ್ಟಿಸಬಲ್ಲಿರೆಂದಾಯಿತು !" ಎಂದು ಜಿಜ್ಞಾಸೆಯಿಂದ ಕೇಳಿದನು ಸಮೀರ.

"ಪ್ರಾಣಿ ಕೋಟಿಗಳಲ್ಲಿ ಒಂದೇ ಬಗೆಯ ಗುಣವಾದರೆ ಮನುಷ್ಯರಲ್ಲಿ ಹಾಗಿಲ್ಲವಪ್ಪಾ. ಎಲ್ಲಾ ಮನುಷ್ಯರ ಗುಣ ಒಂದೇ ರೀತಿಯಾಗಿ ಇರುವುದಿಲ್ಲ. ಮನುಷ್ಯನಲ್ಲಿ ಬುದ್ಧಿಶಕ್ತಿ ಹೆಚ್ಚಾಗಿರುವುದರಿಂದ ಕೇವಲ ಪ್ರಕೃತಿಗೆ ಅಧೀನನಾಗಿರುವವನಲ್ಲ. ಮಾನವ ಜೀವನದಲ್ಲಿ ಮನಸ್ಸು ಪ್ರಧಾನ ಪಾತ್ರ ವಹಿಸುತ್ತದೆ. ಮನಸ್ಸಿನಲ್ಲಿ ಅನುಕ್ಷಣವೂ ಎಷ್ಟೋ ಅನುಮಾನಗಳೂ, ಆಲೋಚನೆಗಳೂ ಪ್ರಶ್ನೆಗಳೂ ಸಮುದ್ರ ತರಂಗಗಳ ಹಾಗೆ ಏಳುತ್ತಾ ಇರುತ್ತವೆ. ಅಂಥವರೊಳಗೆ ಸತ್ಯಸಂಧರೂ, ಮಾಯೆ ಮೋಸಗಳನ್ನು ಅರಿಯದವರೂ ಸ್ವಚ್ಛವಾದ ಮನಸ್ಸಿನವರೂ ನನ್ನ ಕರೆಯನ್ನು ಕೇಳಬಲ್ಲರು" ಎಂದನು ಅಪೂರ್ವ.

ಹೀಗೆ ಮಾತಾಡುತ್ತಾ, ಅವರು ಹಡಗನ್ನು ಸಮೀಪಿಸಿದರು. ಸುತ್ತಲೂ ಕಂಗತ್ತಲೆಯೇ. ಅಪೂರ್ವನು ಗಂಡಮೀನುಗಳಿಗೆ ಕೃತಜ್ಞತೆ ತಿಳಿಸಿ, ಸಮೀರನೊಂದಿಗೆ ಹಡಗಿಗೆ ಏರಿದನು. ಗಂಡ ಮೀನುಗಳೇ ಸಾಕಷ್ಟು ಎತ್ತರಕ್ಕೆ ಎತ್ತಿ ಹಿಡಿದುವು. ಇಬ್ಬರೂ ಕಿಟಿಕೀ ಮೂಲಕ ಹಡಗಿನೊಳಗೆ ಹಣಿಕಿ ನೋಡಿದರು. ಆ ಕೋಣೆಯಲ್ಲಿ ಹುಡುಗರು ಹಾಯಾಗಿ ನಿದ್ದೆ ಮಾಡಿಕೊಂಡಿದ್ದರು. ಅವರು ಕುಡಿದ ಪಾನೀಯದ ಮತ್ತು ಇನ್ನೂ ಅವರನ್ನು ಬಿಟ್ಟಿರಲಿಲ್ಲ. ಆ ಕೋಣೆಯ ಬಾಗಿಲು ಮುಚ್ಚಿ ತಾಳ ಭದ್ರವಾಗಿರುವುದೂ ಗೊತ್ತಾಯಿತು. ಅಪೂರ್ವನು ಮೊದಲು ಕಿಟಿಕಿಯ ಸಂದಿನಿಂದ ಒಳಗೆ ಹೋಗಿ, ಮೇಲಿನ ಕಿಂಡಿಯ ಹಲಗೆಯನ್ನೆತ್ತಿ ಸಮೀರನನ್ನು ಒಳಕ್ಕೆ ತೂರಿಸಿ ತನ್ನನ್ನು ಹಿಡಿದುಕೊಳ್ಳುವಂತೆ ಮಾಡಿ ಕೆಳಗಿಳಿಸಿಕೊಂಡನು.

ನಿಶ್ಶಬ್ದವಾಗಿ ಅವರಿಬ್ಬರೂ ಪಕ್ಕದ ಕೊಟಡಿಯ ಕಡೆಗೆ ಹೋಗಿ ಹಣಿಕಿ ಹಾಕಿದರು. ಅಲ್ಲಿ ಹಡಗಿನ ಯಜಮಾನ ಕುಳಿತುಕೊಂಡು ತನ್ನ ಸಹಚರನೊಂದಿಗೆ ಚರ್ಚೆ ಮಾಡಿಕೊಂಡಿದ್ದನು. ಆ ಕೋಣೆಯ ತುಂಬಾ ಕತ್ತಿಗಳು, ಕೋಲುಗಳು, ಈಟಿಗಳು ಮುಂತಾಗಿ ಇನ್ನೂ ಅನೇಕ ವಿಚಿತ್ರವಾದ ಆಯುಧಗಳು ಕಂಡು ಬಂದುವು. ಅವರ ಮಾತಿನಿಂದ ಆ ಹಡಗು ಸಮುದ್ರ ಚೋರರ ಗುಂಪಿನವರದೆಂದು, ಆ ಯಜಮಾನನು ಆ ಚೋರರ ಗುಂಪಿಗೆ ನಾಯಕನೆಂದು ಅಪೂರ್ವನಿಗೆ ಗೊತ್ತಾಯಿತು.

"ಆ ಹುಡುಗರ ತಾಯಿ ತಂದೆಯರು ತಮ್ಮ ಮಕ್ಕಳನ್ನು ಹುಡುಕುತ್ತಾ ಬರುವುದರೊಳಗೆ ನಾವು ಇಲ್ಲಿಂದ ಹೋಗಿಬಿಡಬೇಕು" ಎಂದು ಕಳ್ಳರ ನಾಯಕನು ಹೇಳಿದ್ದು ಕೇಳಿಸಿತು.

ಅದಕ್ಕೆ ಅವನ ಕೈಕೆಳಗಿನ ಉಪನಾಯಕನು "ಬಂದರೆ ಮಾತ್ರ ಏನು ಮಾಡುತ್ತಾರೆ ? ನಮ್ಮ

ಅನುಜ್ಞೆ ಇಲ್ಲದೆ ಹಡಗಿನ ಹತ್ತಿರ ಬರಲು ಸಾಧ್ಯ ವಿಲ್ಲವಷ್ಟೆ ? " ಎಂದು ಹೇಳುತ್ತ ನಕ್ಕನು.

"ಆದರೂ ನಮ್ಮ ವಿಷಯದಲ್ಲಿ ಯಾರಿಗೂ ಅನುಮಾನ ಬರುವ ಹಾಗೆ ನಡೆದುಕೊಳ್ಳಬಾರದು. ಅಂಥಾದ್ದಕ್ಕೆಲ್ಲ ಅವಕಾಶ ಕೊಟ್ಟರೆ ಹೆಚ್ಚಿನ ಕಷ್ಟ ಬಂದಾವು ಸುಮ್ಮನಿರು " ಎಂದನು ನಾಯಕ.

ಅವರಿಬ್ಬರೂ ಆ ಕೋಣೆಯಿಂದ ಹೊರಗೆ ಹೋದರು. ಅಪೂರ್ವನೂ ಸಮೀರನೂ ಅವರ ಕಣ್ಣಿಗೆ ಬೀಳದಂತೆ ಕತ್ತಲೆಯಲ್ಲಿ ಅಡಗಿಕೊಂಡರು. ನಾಯಕನ ಆಜ್ಞೆ ಹೊರಟ ಕೂಡಲೇ ನಾವಿಕರು ಲಂಗರನ್ನು ಎತ್ತಿದರು. ಹಡಗು ಕದಲಿತು. ನಾಯಕನು ಬಂದು ಹುಡುಗರಿದ್ದ ಕೋಣೆಯ ಬಾಗಿಲು ತೆರೆದನು.

"ಇನ್ನು ಸಮುದ್ರದಲ್ಲಿ ಹಾರಿ ತಿಮಿಂಗಿಲಗಳಿಗೆ ಆಹಾರವಾಗುವುದರ ಹೊರತು ಈ ಹುಡುಗರು ನಮ್ಮಿಂದ ತಪ್ಪಿಸಿಕೊಳ್ಳಲಾರರು !" ಎಂದು ಉಪನಾಯಕನು ಉತ್ಸಾಹದಿಂದ ನೆಗಾಡಿದನು.

ಇಬ್ಬರೂ ಬಾಗಿಲ ಹತ್ತಿರದಿಂದ ಮತ್ತೊಂದು ಬದಿಗೆ ಕದಲಿದರು.

"ಹುಂ. ಸಮೀರಾ, ಇದೇ ಸರಿಯಾದ ಸಮಯ. ನೀನು ಹೋಗಿ ಆ ಹುಡುಗರ ನಡುವೆ ಮಲಕ್ಕೋ " ಎಂದನು ಸಮೀರನ ಕಿವಿಯಲ್ಲಿ ಅಪೂರ್ವ.

ಸಮೀರನು ಹೋಗಿ ಆ ಹುಡುಗರ ನಡುವಿನಲ್ಲಿ ಅವರ ಹಾಗೆಯೇ ಬಿದ್ದುಕೊಂಡನು.

"ಇವರನ್ನು ರತ್ನದ್ವೀಪಕ್ಕೆ ತಾನೇ ಒಯ್ಯು ವುದು ? " ಎಂದು ಉಪನಾಯಕನು ಕೇಳಿದನು.

"ಬೇಡ. ಈಗ ಅಲ್ಲಿಗೆ ಬೇಡ. ಮೊದಲು ಬೇರೆ ಚಿಕ್ಕ ದ್ವೀಪಕ್ಕೆ ಹೋಗಬೇಕು. ಅಲ್ಲಿ ನಾಲ್ಕೈದು ಪ್ರಾಂತ್ಯಗಳಿಂದ ಗುಲಾಮ ವ್ಯಾಪಾರಿಗಳು ಬರು ತ್ತಾರೆ. ಅಲ್ಲಿ ಗುಲಾಮರಾಗುವ ಇಂಥ ಹುಡುಗರಿಗೆ ಹೆಚ್ಚಿನ ಬೆಲೆ ಸಿಗುತ್ತೆ " ಎಂದನು ನಾಯಕ.



ಆಗ ಕೋಣೆಯೊಳಗಿನಿಂದ ಏನೋ ಶಬ್ದ ಕೇಳಿಸಿತು. ಉಪನಾಯಕನು ಬಗ್ಗಿ ಬಗ್ಗಿ ನೋಡಿದನು. ದೀಪವು ಬಹು ಚಿಕ್ಕದಾಗಿತ್ತು. ಕತ್ತಲೆಯಲ್ಲಿ ಒಂದೂ ಕಾಣಲಿಲ್ಲ. ಅವನು ಒಳಗೆ ಹೊಕ್ಕು ಬತ್ತಿಯನ್ನು ಮೇಲೆ ಮಾಡಿದನು.

ನಾಯಕನು ಮಲಗಿದ್ದ ಹುಡುಗರನ್ನು ದೂರ ದಿಂದಲೇ ಪರೀಕ್ಷಿಸಿ ನೋಡುತ್ತ "ಒಬ್ಬೊಬ್ಬ ಹುಡುಗನಿಗೆ ನೂರು ನೂರು ದೀನಾರ ಬರುತ್ತೆ. ಅದಕ್ಕಿಂತ ಕಮ್ಮಿಗೆ ಸಾಧ್ಯವಿಲ್ಲ ಎಂದು ಖಂಡಿತ ಹೇಳಲು ಅಡ್ಡಿ ಇಲ್ಲದಂಥ ಬಲಶಾಲೀ ಹುಡುಗರು ! ಒಂದೇಸಾರಿ ಐನೂರು ದೀನಾರಗಳು ! ಭೇಷ್ !" ಎಂದು ಮೀಸೆ ತಿರುವಿಕೊಂಡನು.

"ಎಂಥಾ ಲೆಕ್ಕ ನಿಮ್ಮದು ? ಲೆಕ್ಕ ಹಾಕುವುದರಲ್ಲಿ ನೀವು ಇಷ್ಟು ಅಧ್ವಾನ್ನರೇ ? ನೂರನ್ನು ಆರರಿಂದ ಗುಣಿಸಿದರೆ ಐನೂರೇನಾ ಬರುತ್ತೇ ? " ಎಂದನು ಹುಡುಗರ ಹತ್ತಿರ ಬಂದಿದ್ದ ಉಪನಾಯಕ.




"ನಿನ್ನ ಕಣ್ಣು ಕುರುಡಾಯಿತೋ ? ಹುಡುಗರು ಐದು ಮಂದಿಯೇ ! ಆರೆಂಥದು ನಿನ್ನ ತಲೆ !" ಎಂದನು ಕೋಪದಿಂದ ನಾಯಕ ಕುಳಿತಲ್ಲಿಂದೇಳುತ್ತ.

"ಅಲ್ಲ, ನಿಜಕ್ಕೂ ಆರು ಮಂದಿ" ಎಂದನು ಉಪನಾಯಕ ಮತ್ತೊಮ್ಮೆ.

"ಹುಚ್ಚ ! ನೀನು ಒಬ್ಬನನ್ನೇ ಎರಡುಸಾರಿ ಎಣಿಸಿದಿ. ಅಥವಾ ಗಾಳಿಯಿಂದ ಇನ್ನೊಬ್ಬನನ್ನು ಸೃಷ್ಟಿಮಾಡಿ ನನ್ನನ್ನು ಹುಚ್ಚುಪಡಿಸಲು ನೋಡುವಿ!"

"ಅಲ್ಲಿಂದಲೇ ಹೀಗೆಲ್ಲಾ ಹೇಳಿಬಿಟ್ಟರಾಯಿತೇ ದೊರೇ ? ಹತ್ತಿರ ಬಂದು, ನೀವೇ ಬಿಡಿಬಿಡಿಯಾಗಿ ಎಣಿಸಿ ನೋಡಿ !" ಎಂದನು ಉಪನಾಯಕ.

ನಾಯಕನು ಒಳಗೆ ಬಂದು ಹುಡುಗರನ್ನು ಲೆಕ್ಕ ಮಾಡಿದನು. ನಿಜಕ್ಕೂ ಆರು ಮಂದಿ ಇದ್ದಾರಲ್ಲ ! ನಂಬಲಾಗದೆ ದೀಪವನ್ನು ಕೈಯಲ್ಲೆತ್ತಿಕೊಂಡು ಹುಡುಗರ ಮುಖಗಳನ್ನು ಪರಿಶೀಲಿಸುತ್ತ ಎರಡು ಸಾರಿ ಲೆಕ್ಕ ಮಾಡಿದನು.

"ಹೀಗೆ ಒಳಿತಾಗುವ ಅದೃಷ್ಟಕ್ಕೆ ಚಿಂತಿಸುವ ಅಗತ್ಯವೇನಿದೆ ? ಐನೂರು ದೀನಾರಗಳಿಗಿಂತ ಆರು ನೂರು ಲಾಭಕರದ ಲೆಕ್ಕ ತಾನೇ? ಈಗ ನಾನೇನೂ ತಪ್ಪಿಬಿದ್ದ ಕುರುಡನಲ್ಲವೆಂದು ಗೊತ್ತಾಯಿತಷ್ಟೆ ? ಅದಕ್ಕಾಗಿ ನನ್ನನ್ನು ಹಾಗೆಲ್ಲಾ ಬೈದದ್ದಕ್ಕೆ ಕ್ಷಮೆ ಕೇಳಬೇಕಾಗಿಲ್ಲ ಬಿಡೀ ದೊರೇ !" ಎಂದು ಗಟ್ಟಿಯಾಗಿ ನಕ್ಕನು ಉಪನಾಯಕ.

"ಏಯ್ ! ನನ್ನ ಮುಂದೆ ಹೀಗೆ ಮಾತಾಡುತ್ತ ಬಾಯಿ ತೆರೆದು ಅಬ್ಬರಿಸಿ ನಗುವಷ್ಟು ಧೈರ್ಯವೇ ? ನಿನ್ನ ಪೊಗರಿಗೆ ಈಗಲೇ..." ಎನ್ನುತ್ತ ನಾಯಕನು ನೇತಾಡುತ್ತಿದ್ದ ಕತ್ತಿಯನ್ನು ಎತ್ತಿ ಹಿಡಿದನು.

"ನಾನೇನೂ ಹೇಳಲಿಲ್ಲ. ನೀವಂದ ಮಾತನ್ನು ನಿಮಗೇ ಒಪ್ಪಿಸಿದ್ದೇನೆ, ಅಷ್ಟೇ" ಎಂದು ಉಪ ನಾಯಕನು ಹಿಂದಡಿ ಇಟ್ಟನು.

"ಒಂದುಸಾರಿಯಲ್ಲ, ನೂರುಸಾರಿ ಹೇಳಿದರೂ ವಾಪಾಸು ಮಾಡುವಿಯಾ ! ನೀನೇ ಕುರುಡಾ ! ಕುರುಡಾ ! ಮೂರ್ಖಾ ! ಮೂರ್ಖಾ !" ಎಂದು ಗಟ್ಟಿಯಾಗಿ ಕೂಗಿದನು ನಾಯಕ.

ಅವರ ಕೂಗಾಟ ಕೇಳಿ ಹಡಗಿನಲ್ಲಿದ್ದ ಅನುಚರರೆಲ್ಲರೂ ಅಲ್ಲಿಗೆ ಬಂದು ಸೇರಿದರು. ನಾಯಕನಿಗೂ, ಉಪನಾಯಕನಿಗೂ ಒಳಗೊಳಗೇ ಹಗೆ ಇರುವ ಸಂಗತಿ ಅವರಿಗೆಲ್ಲಾ ಗೊತ್ತಿದ್ದರೂ ಈಗ ಒಮ್ಮೆಗೇ ಇಷ್ಟು ದಾರುಣವಾಗಿ ಹೊರಬೀಳುತ್ತದೆಂದು ಯಾರೂ ಊಹಿಸಿರಲಿಲ್ಲ.

"ಹೋಗೋ ದೊಡ್ಡ ನಾಯಕಾ ಅಂತ ಹೆಮ್ಮೆ ಬೊಗಳುವವನೇ ! ನಿನ್ನ ಮೊಂಡು ಕತ್ತಿಯನ್ನು ನೋಡಿ ಹೆದರಲಿಕ್ಕೆ ನಾನೇನೂ ಎದೆಗೇಡಿಯಲ್ಲ ! ನಿನ್ನ ಬೆದರಿಕೆ ನನ್ನ ಹತ್ತಿರ ಸಾಗದು ! ಜಾಗ್ರತೇ !" ಎಂದನು ಉಪನಾಯಕ ಕಣ್ಣು ಕೆಕ್ಕರಿಸಿ.

"ಏನಂದಿಯೋ ! ನಮಕ್ ಹರಾಮ್ ! ಈ ಮೊಂಡು ಕತ್ತಿಯ ರುಚಿ ತೋರಿಸುತ್ತೇನೆ ನೋಡು !"

ಎಂದು ಅರಚುತ್ತ, ಕಣ್ಣು ಕೆಕ್ಕರಿಸಿ ಕತ್ತಿಯ ಸಮೇತ ಅವನ ಮೇಲೆ ರಭಸದಿಂದ ಎಗರಿದನು ನಾಯಕ.

ಉಪನಾಯಕನು ಒಂದಡಿ ಹಿಂದೆ ಹಾರಿ, ಪಕ್ಕದಲ್ಲಿದ್ದ ಕತ್ತಿಯನ್ನು ಎತ್ತಿಕೊಂಡು ನಾಯಕನ ಎದೆಯೊಳಗೆ ಒತ್ತಿ ತೂರಿಸಿದನು. ನಾಯಕನು ಕೆಟ್ಟ ಸ್ವರದಿಂದ ಅರಚುತ್ತಾ ಅಂಗಾತ ಬಿದ್ದನು.

ಅನುಚರರೆಲ್ಲಾ ಹೆದರಿ ಮೌನವಾಗಿ ಶಿಲಾ ಪ್ರತಿಮೆಗಳಂತೆ ನಿಂತುಬಿಟ್ಟರು.

ಉಪನಾಯಕನು ದಿಕ್ಕುಗಳು ಗಡಚಿಕ್ಕುವಂತೆ ನಗುತ್ತ ಅನುಚರರನ್ನು ನೋಡಿ, "ಈ ದುಷ್ಟ ದ್ರೋಹಿಗೆ ತಕ್ಕ ಶಿಕ್ಷೆ ಬಿತ್ತು. ನಮ್ಮ ಹಳೆಯ ನಾಯಕನನ್ನು ಇವನು ವಂಚನೆಯಿಂದ ಹೇಗೆ ಕೊಂದನೆಂಬುದು ನಿಮಗೆ ಗೊತ್ತಿದೆಯಷ್ಟೆ? ನಾನು ಇವನನ್ನು ಹಾಗೆ ಮೋಸದಿಂದ ಕೊಲ್ಲಲಿಲ್ಲ. ಪ್ರಾಣ ರಕ್ಷಣೆಗಾಗಿಯೇ ಕತ್ತಿಯನ್ನು ಉಪಯೋಗಿಸಿದ್ದೇನೆ. ಅಲ್ಲದೆ ಐದಕ್ಕೂ ಆರಕ್ಕೂ ವ್ಯತ್ಯಾಸ ತಿಳಿಯದ ಈ ಮೂರ್ಖನು ನಮಗೆಲ್ಲಾ ನಾಯಕನಾಗಿರಲು ತಕ್ಕವನಲ್ಲ. ಇವನ ಶವವನ್ನು ಸಮುದ್ರಕ್ಕೆ ಬೀಸಿ ಬಿಸುಟು ನಿಮ್ಮ ನಿಮ್ಮ ಕೆಲಸ ನೋಡಿಕೊಳ್ಳಿ!" ಎಂದು ಆಜ್ಞೆ ಮಾಡಿದನು.

ಅವನ ಆಜ್ಞೆಯ ಪ್ರಕಾರ ಕೆಲವರು ಸೇರಿ ಸತ್ತ ನಾಯಕನ ಶವವನ್ನು ಸಮುದ್ರಕ್ಕೆ ತಳ್ಳಿದರು.

ಹಡಗಿನೊಳಗಿನ ಕೂಗಾಟಗಳನ್ನು ಕೇಳಿ ಮಲಗಿದ್ದ ಹುಡುಗರೆಲ್ಲಾ ಎದ್ದು, ಕಿಟಿಕೀ ಮೂಲಕ ಹೊರಗಡೆ ನೋಡಲು ಹೋದರು. ಕೂಡಲೇ ಸವಿಾರನು ದೀಪನಂದಿಸಿ ಅವರೊಡನೆ ಹೀಗೆ ಗುಸುಗುಟ್ಟಿದನು. "ಈ ಕಳ್ಳರ ಗುಂಪು ನಮ್ಮನ್ನು ಎಚ್ಚರ ತಪ್ಪುವ ಮದ್ದು ಕುಡಿಸಿ, ಸಾಗಿಸಿಕೊಂಡು ದೂರದ ದ್ವೀಪದಲ್ಲಿ ಗುಲಾಮರಾಗುವಂತೆ ಮಾರಾಟ ಮಾಡಲು ಉಪಾಯ ಮಾಡಿದ್ದಾರೆ. ನನ್ನನ್ನು ನಂಬಿರಿ. ಈಗ ನಿದ್ದೆಯಲ್ಲಿರುವ ಹಾಗೆಯೇ ಮಲಗಿರಿ. ತಪ್ಪಿಸಿಕೊಳ್ಳುವ ಉಪಾಯ ಹೇಳುತ್ತೇನೆ. ಈ ಕಳ್ಳರ ಹಣದ ಲೆಕ್ಕದಲ್ಲಿ ಅವರೊಳಗೆ ನಡೆದ ಮೇಲಾಟದ ಜಗಳದಲ್ಲಿ ಇವರ ನಾಯಕ ಸತ್ತುಬಿದ್ದ. ಅದಾವುದೂ ನಮಗೆ ಸ್ವಲ್ಪವೂ ತಿಳಿಯದಂತೆ, ಅವರು ಕುಡಿಸಿದ ಮತ್ತು ಮದ್ದಿನಲ್ಲಿ ನಾವಿನ್ನೂ ಎಚ್ಚರಗೆಟ್ಟಿರುವ ಹಾಗೆ ನಟಿಸಬೇಕು. ಕಳ್ಳರ ಉದ್ದೇಶ ನಾವು ತಿಳಿದದ್ದು ಅವರಿಗೆ ಗೊತ್ತಾದರೆ ನಾವೆಲ್ಲರೂ ಬಂಧನಕ್ಕೆ ಸಿಕ್ಕಿ ಮತ್ತಷ್ಟು ಅಪಾಯಕ್ಕೆ ಸಿಕ್ಕಿಬಿದ್ದೇವು."

ಈ ಮಾತುಗಳನ್ನು ಕೇಳಿ ಆ ಹುಡುಗರು, ಈ ಹೊಸ ಗೆಳೆಯನು ಹೇಗೆ ಬಂದನೆಂಬ ಆಶ್ಚರ್ಯದೊಂದಿಗೆ ಸಂತೋಷವೂ ಬೆರೆಯಲು, ಅವನು ಹೇಳಿದ ಹಾಗೆಯೇ ಮೈ ತಿಳಿಯದವರಂತೆ ಮಲಗಿದರು.

— (ಇನ್ನೂ ಇದೆ)






೭

[ಸದಾನಂದ ಮುನಿ ಸೃಷ್ಟಿಸಿದ ಅಪೂರ್ವನೆಂಬ ವಿಚಿತ್ರದವನು ಸಮುದ್ರ ಚೋರರು ಅಪಹರಿಸಿಕೊಂಡು ಹೋಗುತ್ತಿದ್ದ ಐವರು ಹುಡುಗರನ್ನು ಕಾಪಾಡಲು ಸಮೀರನನ್ನು ಗಂಡಮಿಾನಿನ ಮೂಲಕವಾಗಿ ಕರೆದು ಕೊಂಡು ಹಡಗಿನೊಳಗೆ ಸೇರಿದನು. ಹಡಗು ಮುಂದೆ ಸಾಗುವಾಗ ಚೋರನಾಯಕ ಉಪನಾಯಕರೊಳಗೆ ಸಮೀರನಿಂದಾಗಿ ಜಗಳವೆದ್ದು ಉಪನಾಯಕನೇ ಚೋರನಾಯಕನನ್ನು ಕೊಂದುಬಿಟ್ಟನು. — ಆಮೇಲೆ]

ಉಪನಾಯಕನೇ ಇಡೀ ಹಡಗಿಗೆಲ್ಲಾ ನಾಯಕನಾದಂತಾಗಿ ನೌಕರರೆಲ್ಲಾ ಅವನು ಹೇಳಿದಂತೆಯೇ ಕೇಳಿದರು. ನಾಯಕನ ಕಳೇಬರವನ್ನು ಸಮುದ್ರಕ್ಕೆ ಬಲಿ ಕೊಡಿಸಿದ ಮೇಲೆ ಉಪನಾಯಕನ ಮುಖದಲ್ಲಿ ಸಂತೋಷದ ನಗು ಹರಡಿತು.

ಅವರಿಬ್ಬರ ದೊಡ್ಡಸ್ತಿಕೆಯ ಮೇಲಾಟದ ಭಯಂಕರ ಹೋರಾಟವನ್ನು ಕಣ್ಣಾರೆ ಕಂಡ ಐವರು ಹುಡುಗರು ಒಬ್ಬನನ್ನು ಎತ್ತಿ ಸಮುದ್ರಕ್ಕೆ ಬೀಸಿದುದನ್ನು ನೋಡಿ, "ಅಯ್ಯೋ!" ಎಂದು ಕೂಗಲು ಬಾಯಿ ತೆರೆದಾಗ ಸಮೀರನು ಅವರ ಬಾಯಿಯನ್ನು ಒತ್ತಿ "ಹುಶ್, ನಾನಿದ್ದೇನೆ. ಹೆದರಬೇಡಿ. ಗಾಢ ನಿದ್ರೆ ನಟಿಸಿರಿ" ಎಂದು ಪಿಸುಗುಟ್ಟಿ ಧೈರ್ಯ ಹೇಳಿ, ತಾನೂ ಅವರೊಂದಿಗೆ ಮೊದಲಿನಂತೆಯೇ ಮಲಗಿದನು. ಹೆಮ್ಮೆಯ ಸಂಭ್ರಮದಲ್ಲಿರುವ ಉಪನಾಯಕನಿಗೆ ಇದಾವುದೂ ತಿಳಿಯದು.

ಬೆಳಗಾಗುವ ಸೂಚನೆಯಾಗಿ ಮೂಡುಬಾನವು ಕೆಂಪೇರುತ್ತಿರಲು ಉಪನಾಯಕನು ಹುಡುಗರು ಮಲಗಿದ್ದ ಕೋಣೆಯೊಳಗೆ ಪ್ರವೇಶಿಸಿ, "ಏಳಿರೇಳಿರಿ! ಹೀಗೆ ಬಂದು ನೋಡಿರಿ! ಈ ಸಮುದ್ರ ಮಧ್ಯದಲ್ಲಿ ಸೂರ್ಯೋದಯವು ಹೇಳಲಾಗದಷ್ಟು ಚೆಂದದ



ದವನನ್ನು ಕೇಳುವಿರಾ ? ಅವನನ್ನು ಬೇರೊಂದು ಕೆಲಸಕ್ಕೆ ಕಳಿಸಲಾಗಿದೆ. ಬನ್ನಿ ಬನ್ನಿ !" ಎಂದನು ಉಪನಾಯಕ.

"ಏನು ಹಡಗಿನ ಯಜಮಾನರೋ ? ಮತ್ತೆ ಆವಾಗ ನಮ್ಮೊಂದಿಗೆ ಇದ್ದವರು...ಯಜಮಾನರು ಅಲ್ಲವಾ ?" ಎಂದು ಸಮೀರನು ಆಶ್ಚರ್ಯದಿಂದ ಕೇಳಿದನು.

"ಅವರೋ ? ಈ ಮೊದಲೇ ಹೇಳಿದೆನಲ್ಲಾ ? ಅವನೂ ನಾನೂ ಇಬ್ಬರೂ ಒಂದೇ ಎಂದುಕೊಳ್ಳಿ. ನಿಮ್ಮನ್ನು ಈ ಹಡಗಿಗೆ ತಂದು ಸೇರಿಸಿದ ಆ ದೊಡ್ಡ ಮನುಷ್ಯನಿಗೆ ಒಂದು ಮುಖ್ಯ ಕೆಲಸ ಬಂತು. ಇನ್ನೊಂದು ಕಡೆಗೆ ಹೋಗಿದ್ದಾನೆ. ನಿಮ್ಮನ್ನು ಜಾಗ್ರತೆಯಿಂದ ನೋಡಿಕೊಳ್ಳುವ ಬಾಧ್ಯತೆ ನನಗೆ ಒಪ್ಪಿಸಿಕೊಟ್ಟು ಹೋಗಿದ್ದಾನೆ. ಈಗ ನೀವು ಹಡಗಿನಲ್ಲಿರುವಿರೆಂಬ ಸಂಗತಿ ಗೊತ್ತಿದೆಯಷ್ಟೆ ? ಹಡಗಿನ ಒಳಭಾಗ ಮಾತ್ರ ನೋಡಿದರೆ ಸಾಕೆ ? ಹಡಗು ಸಾಗುವಾಗ ಸಮುದ್ರದ ಚೆಂದ ನೋಡಬೇಡವೇ ? ಬನ್ನಿ ನನ್ನೊಂದಿಗೆ !" ಎಂದನು ಗರಳನಾಭ.

ಸಮೀರನು ಎದ್ದು ನಿಂತು ಸರಿಯಾಗಿ ಮೈ ಮುರಿದು ಕೈಗಳನ್ನು ಕೊಡರಿ, ಸುತ್ತಲೂ ನೋಡಿ, "ಅರರೇ ! ಬಹಳ ಹೊತ್ತಾಯಿತು. ನಾವು ಬೇಗನೇ ನಮ್ಮ ಮನೆಗೆ ಹೋಗಬೇಕು" ಎಂದನು.

ಅದನ್ನು ಕೇಳಿ ರಾಕ್ಷಸನ ಹಾಗೆ ಗಹಗಹನೆ ನಗಬೇಕೆಂದಿದ್ದ ಗರಳನಾಭನು ಕ್ಷಣ ಮಾತ್ರದಲ್ಲಿ ಸಮಾಳಿಸಿಕೊಂಡು, "ನಿಜ ಸಂಗತಿ ಏನೆಂಬುದೊಂದೂ ನನಗೆ ತಿಳಿಯದು. ನಿಮ್ಮ ಮನೆಯವರು ತಾನೇ ನಿಮ್ಮನ್ನು ಇಲ್ಲಿಗೆ ಕಳುಹಿಸಿದ್ದಾರೆ ? ಪರವಾಗಿಲ್ಲ, ಹೆದರಬೇಡಿ. ನೀವು ಆರು ಮಂದಿಗಳೂ ರಾತ್ರಿಯಲ್ಲಿ ಗಡದ್ದು ನಿದ್ದೆ ಮಾಡಿದಿರಿ. ನಿಮ್ಮ ಸುಖ ನಿದ್ದೆ ಕೆಡಿಸಲಿಕ್ಕೆ ಇಷ್ಟವಿಲ್ಲದೆ ನಾನು ಸುಮ್ಮನಿದ್ದೆ. ರಾತ್ರಿಯಲ್ಲೇ ಹಡಗು ಹೊರಟು ಈಗ ಹೋಗುತ್ತಾ ಸೊಗಸಿನಿಂದಿರುವುದನ್ನು ನೋಡಿ ನೀವು ಆನಂದ ಪಡೆಯಿರಿ ! ಎಷ್ಟು ಹೊತ್ತು ಮಲಗುವಿರಪ್ಪಾ ?" ಎಂದು ನಗುತ್ತಾ, ಹುಡುಗರನ್ನು ತಟ್ಟಿ ತಟ್ಟಿ ಎಬ್ಬಿಸಿದನು.

ಸಮೀರನ ಮೂಲಕ ಅಪೂರ್ವನು ಹೇಳಿ ಕಳುಹಿಸಿದ ಹಾಗೆಯೇ ಧೈರ್ಯದಿಂದ ಕಣ್ಣುಮುಚ್ಚಿಕೊಂಡು ಗಾಢ ನಿದ್ರೆಯನ್ನು ನಟಿಸಿಕೊಂಡಿದ್ದ ಆ ಹುಡುಗರು, ಕಣ್ಣುಜ್ಜಿ ಆಕಳಿಸಿಕೊಂಡು ಮೈ ಕೈ ಮುರಿದು ಏಳುತ್ತಾ, ಒಮ್ಮೆ ಸುತ್ತುಮುತ್ತಲೂ ನೋಡಿ, "ಏನಿದೂ ? ನಾವು ಎಲ್ಲಿದ್ದೇವೆ ? ನೀವು ಯಾರು ?" ಎಂದು ಒಬ್ಬ ಹುಡುಗ ಕೇಳಲು ಎಲ್ಲರೂ ಅದೇ ಪ್ರಶ್ನೆಯಂತೆ ಅವನ ಮುಖ ನೋಡಿದರು.

"ನಾನು ಈ ಹಡಗಿನ ಯಜಮಾನ. ಗರಳನಾಭನೆಂದು ನನ್ನ ಹೆಸರು" ಎಂದು ಹೇಳಿ "ಓಹೋ ! ಈಗ ತಿಳಿಯಿತು. ನಿಮಗೆ ಹಡಗನ್ನೆಲ್ಲಾ ತೋರಿಸಿ

ಇದೆ. ಗೊತ್ತಾಗುತ್ತದಷ್ಟೆ? ಈಗ ಬೆಳಗಾಗುತ್ತಾ ಇದೆ. ಬಹಳ ದೂರ ಬಂದಿದ್ದೇವೆ. ಈಗ ನೀವು ಈಜುತ್ತಾ ತೀರಕ್ಕೆ ಹೋಗಲು ಸಾಧ್ಯವೂ ಇಲ್ಲ. ಎಷ್ಟು ದೊಡ್ಡ ಈಜುಗಾರನಾದರೂ ತೆರೆಗಳ ಬಲ ಬಹಳ ಹೆಚ್ಚು. ಒಂದೇ ಬಾಯಿಗೆ ನುಂಗುವ ಮೀನುಗಳಿವೆ. ಹಾಯಾಗಿ ಚಂದ ನೋಡುತ್ತಾ ಸಂತೋಷದಿಂದ ಸಮುದ್ರ ವಿಹಾರ ಮಾಡಿರಿ" ಎಂದನು ಗರಳನಾಭ ಪರಿಹಾಸ ಮಾಡುವಂತೆ.

ಹುಡುಗರು ಏನೂ ತೋರದವರಂತೆ ಒಬ್ಬರ ಮುಖವನ್ನೊಬ್ಬರು ನೋಡಿದರು. ಈ ಮೊದಲೇ ಸಮೀರನು ಧೈರ್ಯ ಹೇಳಿದ್ದರಿಂದ ತಮ್ಮೊಳಗಿನ ಆಕಸ್ಮಿಕವಾಗಿ ಬಂದ ಅಪರಿಚಿತನ ಮೇಲೆಯೇ ಇತ್ತು ಅವರ ನಂಬಿಗೆ.

"ಹಾಗಾದರೆ ಈಗ ನಮ್ಮ ಗತಿ ಏನು? ನಮ್ಮ ಮನೆಯವರಿಗೆ ತಿಳಿಯದೆಯೇ ಬಂದುಬಿಟ್ಟೆವು. ಅವರು ಗಾಬರಿ ಬೀಳುತ್ತಾರೋ ಏನೋ!" ಎಂದನು ಸಮೀರ ಮತ್ತೆ ಗರಳನಾಭನನ್ನು ನೋಡಿ.

"ಹೆದರಬೇಡಿ! ಕೆಲವು ದಿನಗಳ ಮೇಲೆ ತುಂಬಾ ಅನುಭವಗಳಿಸಿ ನಾವು ಮತ್ತೆ ತೀರ ಸೇರಿಕೊಳ್ಳುತ್ತೇವೆ. ಆಮೇಲೆ ನಿಮ್ಮನ್ನು ನಿಮ್ಮೂರಿಗೆ ಕಳಿಸುವ ಏರ್ಪಾಡು ಮಾಡಿದರಾಯಿತಷ್ಟೆ? ಅದುವರೆಗೆ ಅದ್ಭುತವಾದ ಪ್ರಕೃತಿ ಸೌಂದರ್ಯ ನೋಡಿಕೊಂಡಿರಿ. ನಿಮ್ಮ ಮನೆಯವರಿಗೆ ನಾನೇ ಸಮಾಧಾನ ಹೇಳುತ್ತೇನೆ" ಎಂದನು ಗರಳನಾಭ.

"ನಿಮ್ಮ ಮಾತು ಚೆನ್ನಾಗೇ ಇದೆ. ಆದರೆ ಮನೆಯವರು ನೆರೆಕರೆಯವರೂ ಮುಖ್ಯವಾಗಿ ನಮ್ಮ ತಾಯಂದಿರು ಎಷ್ಟು ಸಂಕಟಪಡುವರೋ? ತಂದೆಯವರು ಎಷ್ಟು ಚಡಪಡಿಸುವರೊ?" ಎಂದು ಇನ್ನೊಬ್ಬ ಹುಡುಗನು ಬಹಳ ನೊಂದುಕೊಳ್ಳುತ್ತಾ ಹೇಳಿದನು.

"ಸ್ವಲ್ಪ ದಿನ ತಾನೇ? ಆಮೇಲೆ ನಿಮ್ಮನ್ನು ನೋಡಿ ಎರಡು ಮೂರು ಪಾಲು ಹೆಚ್ಚು ಸಂತೋಷಪಡುವಷ್ಟು ನೀವು ಗಟ್ಟಿಗರಾಗುವಿರಿ!" ಎಂದನು ಗರಳನಾಭ ನಗುತ್ತ.





"ನೀವು ದೊಡ್ಡ ಮೇಧಾವಿಗಳಾಗಿದ್ದೀರಿ! ನಿಮ್ಮ ದಯವೇ ನಮಗೆ ಧೈರ್ಯ" ಎಂದನು ಸಮೀರ.

ಆ ಮಾತು ಕೇಳಿ ಗರಳನಾಭನು ಸಂತೋಷದಿಂದ ಉಬ್ಬಿದನು. ಗರ್ವದಿಂದ ದೂರದಲ್ಲಿರುವ ತನ್ನ ಅನುಚರರನ್ನು ನೋಡಿದನು. ಆಮೇಲೆ "ಬನ್ನಿ" ಎಂದು ಹುಡುಗರನ್ನು ಕೋಣೆಯಿಂದ ಕರೆದು ಕೊಂಡು ಹೊರಗೆ ಹೋದನು.

ಉಳಿದ ಐವರು ಹುಡುಗರು ಸಮುದ್ರದಲ್ಲಿ ಸೂರ್ಯೋದಯದ ಸುಂದರಾಕಾಶವನ್ನು ನೋಡಿ ಆನಂದಿಸಿಕೊಂಡಿರುವಾಗ, ಸಮೀರನು ಅಪೂರ್ವನ ಕರೆ ಸನ್ನೆ ಕೇಳಿ ಆ ಕಡೆಗೆ ತಿರುಗಿದನು. ಅಲ್ಲಿ ಯಾರೂ ಕಾಣಿಸಲಿಲ್ಲ.

ಹಡಗಿನ ಎಡ ಭಾಗದಲ್ಲಿ ಬಾಗಿ ನೋಡಿದನು. ಅಪೂರ್ವನು ಒಂದು ಗಂಡಮೀನಿನ ಮೇಲೆ ನಿಂತು ಕೊಂಡಿದ್ದನು. ಆ ಗಂಡಮೀನು ಹಡಗನ್ನು ಅನು ಸರಿಸಿಕೊಂಡು ಬರುತ್ತಾ ಇತ್ತು!

ಅಪೂರ್ವನು ಹಡಗನ್ನು, ದೊಡ್ಡ ಗಂಡಮೀನಿನ ಬಾಲದ ತುದಿಯಲ್ಲಿ ನಿಂತು. ಸಮೀರನಿಗೆ ಮಾತ್ರ ಕೇಳಿಸುವಂತೆ "ನೀವು ಕಳ್ಳರ ಒಡೆತನದಿಂದ ತಪ್ಪಿಸಿಕೊಳ್ಳಲಿರುವ ಜಾಡು ಅವರಿಗೆ ಗೊತ್ತಾಗಿ ಬಿಟ್ಟರೆ ನಿಮ್ಮನ್ನೆಲ್ಲಾ ಚಿತ್ರಹಿಂಸೆ ಮಾಡಿಯಾರು! ಈಗ ನಿಮ್ಮ ಪಕ್ಕದ ಒಳ್ಳೆಯ ರೀತಿಯಲ್ಲಿ ನಡೆಯುವು ದಕ್ಕೆ ಕಾರಣ ನಿಮ್ಮಿಂದ ಯಾವುದೋ ಒಳ್ಳೆಯ ಲಾಭಗಳನ್ನಪೇಕ್ಷಿಸಿರುವುದೆಂಬುದನ್ನು ನೆನಪಿನಲ್ಲಿಟ್ಟು ಕೊಳ್ಳಿರಿ. ಅದು ಈ ಮೊದಲೇ ಗೊತ್ತಾಗಿದೆ ಯಷ್ಟೆ? ಎಚ್ಚರದಲ್ಲಿರಿ. ಇನ್ನು ಸ್ವಲ್ಪ ಹೊತ್ತಿನಲ್ಲಿ ವರ್ತಕರ ಹಡಗೊಂದು ಈ ಕಡೆಗೆ ಬರುತ್ತದೆಂದೂ, ಅದರಲ್ಲಿದ್ದುದನ್ನೆಲ್ಲಾ ಕೊಳ್ಳೆ ಹೊಡೆಯಬೇಕೆಂದೂ ಗರಳನಾಭನು ತನ್ನವರೊಂದಿಗೆ ಮಾತಾಡುವುದನ್ನು ಕೇಳಿದೆನು. ಅವರ ಪಥಕವು ಜಯವಾಗಲಿಕ್ಕೆ ನಿಮ್ಮನ್ನು ಉಪಯೋಗಿಸಲೂ ಬಹುದು. ಅದು ವರೆಗೂ ಅವರೊಡನೆ ತುಂಬಾ ಜಾಗರೂಕತೆ ಯಿಂದಿರಿ! ಆಮೇಲೆ ಆ ಹಡಗಿನವರಿಂದ ನಿಮಗೆಲ್ಲಾ ಒಳಿತಾಗುತ್ತದೆ" ಎಂದು ಎಚ್ಚರಿಕೆ ಹೇಳಿದನು.

ಆಗಲೇ ತುಸು ದೂರದಲ್ಲಿದ್ದ ಗರಳನಾಭನು ಹುಡುಗರ ಕಡೆಗೆ ನೋಡಿ, ಸಮೀರನನ್ನು ಉದ್ದೇಶಿಸಿ, "ಎಲೋ ಹುಡುಗಾ! ಅಷ್ಟು ಬಗ್ಗಿ ಸಮುದ್ರಕ್ಕೆ ಹಣಿಕಿ ಹಾಕಬೇಡ್ವೋ! ಒಮ್ಮೆಗೇ ಸಮುದ್ರಕ್ಕೆ ಬಿದ್ದೀಯೋ! ತಿಮಿಂಗಿಲಗಳು ಬಾಯಿ ತೆರೆದುಕೊಂಡೇ ಇದ್ದಾವು. ಬಿದ್ದುಗಿದ್ದರೆ ನೇರಾಗಿ ಅವುಗಳ ಹೊಟ್ಟೆ ಯೊಳಗೇ ಹೋಗುವಿರಿ! ಸಾಕಿನ್ನು, ಇತ್ತ ಬನ್ನಿ ರಪ್ಪಾ!" ಎಂದನು ನಗುತ್ತಾ.

ಕೂಡಲೇ ಸಮೀರನು ಗರಳನಾಭನ ಕಡೆಗೆ ನೋಡಿ ನಗುತ್ತಾ, ಹುಡುಗರೊಂದಿಗೆ ಅವನ ಬಳಿಗೆ ಹೋದನು. ಎಲ್ಲರೂ ಊಟ ಮಾಡಲು ಕುಳಿತು ಕೊಂಡರು. ಆಗ ಸಮೀರನು, "ಹೌದು, ನೀವು ಈ ಹಡಗಿನಲ್ಲಿ ಎಂಥಾ ಮುಖ್ಯ ಉದ್ಯೋಗದವರಾಗಿ

ದ್ದೀರಿ? ನೋಡಿದರೆ ಬಹು ದೊಡ್ಡವರ ಹಾಗೆ ಕಾಣುವಿರಿ!" ಎಂದನು ಪಾಪಟದವನ ಹಾಗೆ.

"ನಾವು ಸಮುದ್ರ ವ್ಯಾಪಾರಿಗಳಪ್ಪಾ. ಇತ್ತೀಚೆಗೆ ಯಾಕೋ ನಮ್ಮ ದಿನಗಳು ಚೆನ್ನಾಗಿಲ್ಲದೆ, ಸಮುದ್ರ ಚೋರರು ಬಂದು ಬಿದ್ದು ಎಲ್ಲಾ ದೋಚಿಕೊಂಡು ಹೋದರು!" ಎಂದನು ಗರಳನಾಭ.

"ಎಂಥಾ ದುಷ್ಟರಪ್ಪ!" ಎಂದನು ಸಮೀರ.

"ಸಾಧಾರಣ ದುಷ್ಟರಲ್ಲಪ್ಪಾ. ಪರಮ-ದುರ್ಮಾರ್ಗಿಗಳು! ನಾವು ನಿರಾಯುಧರಾಗಿರುವ ಸಮಯ ನೋಡಿ ಹಠಾತ್ತಾಗಿ ನಮ್ಮ ಮೇಲೆ ದಾಳಿ ಮಾಡಿಬಿಟ್ಟರು. ಇರುವೆಗಳಿಗೆ ಕೂಡಾ ಹಾನಿ ಮಾಡದಂಥ ನಮ್ಮಲ್ಲಿಯ ನಾಲ್ವರ ಪ್ರಾಣ ತೆಗೆದು ಬಿಟ್ಟರು ಆ ದುಷ್ಟ ಕಾಕೋಟಕರು!" ಎಂದನು ಗರಳನಾಭ ಬಹಳ ಚಿಂತೆಯಿಂದ.

"ಅಯ್ಯೊ ಪಾಪ! ನೀವೆಲ್ಲಾ ಎಷ್ಟು ಒಳ್ಳೆಯವರೆಂತ ನಮಗೆ ಗೊತ್ತೇ ಇದೆ. ಇಲ್ಲದಿದ್ದರೆ ಸ್ವಲ್ಪವೂ ಪರಿಚಯವೇನಿಲ್ಲದ ನಾವು ಆರು ಮಂದಿಯನ್ನು ಈ ಹಡಗಿನಲ್ಲಿ ಆದರಿಸಿ ಊಟ ತಿಂಡಿ ಕೊಟ್ಟು ಹೀಗೆ ಸಮುದ್ರ ವಿಹಾರ ಮಾಡಿಸುವಿರೆಂದರೆ ನೀವು ಎಷ್ಟು ದಯಾವಂತರೆಂದು ಹೇಳಲು ಸಾಧ್ಯವಿಲ್ಲ. ಅದು ಸರಿಯೇ. ಈಗ ನೀವು ಏನು ಮಾಡಬೇಕೆಂದಿರುವಿರಿ?" ಎಂದು ಕೇಳಿದನು ಸಮೀರ.

"ಮೊದಲು ಒಂದು ದ್ವೀಪವನ್ನು ಸೇರಿಕೊಳ್ಳುತ್ತೇವೆ. ಅಲ್ಲಿ ಸ್ವಲ್ಪ ಧನ ಸಂಪಾದನೆಗೆ ಮಾರ್ಗ ಕಂಡೀತು..." ಎಂದು ಗರಳನಾಭನು ಮತ್ತೇನೋ ಹೇಳಲಿರುವಷ್ಟರಲ್ಲಿ ಸಮೀರನು ಬಾಯಿ ಹಾಕಿ "ಅದು ಹೇಗೆ ಸಾಧ್ಯ? ಈ ಹಡಗಿನಲ್ಲಿ ನಾವು ಆರು ಮಂದಿ ಹೊಸಬರ ಹೊರತು ಸರಕು ಗಿರಕು ಯಾವುದೂ ಇಲ್ಲವಲ್ಲಾ?" ಎಂದು ಕೇಳಿದನು.

"ಓಹ್! ಹುಡುಗನಾದರೂ ತಮಾಷೆಯಾಗಿ ಮಾತಾಡುವಿ! ಬುದ್ಧಿಯೂ ಚುರುಕಾಗಿದೆ, ಹುಂ,



ಸರಕುಗಳಿಲ್ಲದಿದ್ದರೂ ನೀವು ಆರು ಮಂದಿಗಳೂ ಸ್ವಲ್ಪ ಸಹಾಯ ಮಾಡಿಬಿಟ್ಟರೆ ನಾವು ಆ ದ್ವೀಪ ಸೇರುವುದರೊಳಗೆ ಬೇಕಾದಷ್ಟು ಸರಕು ಸಂಪಾದಿಸಲು ಸಾಧ್ಯವಿದೆ!" ಎಂದನು ಗರಳನಾಭ.

"ಏನೇನು? ನಡು ಸಮುದ್ರದಲ್ಲಿಯೋ? ಅದು ಹೇಗಪ್ಪ? ಹುಡುಗರಾದ ನಾವು ಏನು ಸಹಾಯ ಮಾಡೇವು? ಆಶ್ಚರ್ಯವಾಗಿದೆ ನಿಮ್ಮ ಮಾತು!" ಎಂದನು ಸಮೀರ.

"ನಮ್ಮ ಹಡಗನ್ನು ದೋಚಿದ ಕಳ್ಳರ ಹಡಗು ಬೇಗವಲ್ಲೇ ಈಕಡೆಗೇ ಬರುತ್ತದೆ. ಅದು ಸಮೀಪ ಬಂದ ಕೂಡಲೇ ನಾವು ವಿಷಾದ ಚಿಹ್ನೆ ಅಂದರೆ ಕಪ್ಪು ಬಾವುಟ ಹಾರಿಸುತ್ತೇವೆ. ನೀವು ಹಡಗಿನ ಕೋಣೆಗಳ ಹೊರಬದಿಯಲ್ಲಿ ನಿಂತುಕೊಂಡು ಆ ಹಡಗಿನಲ್ಲಿರುವವರಿಗೆ ಕೇಳಿಸುವ ಹಾಗೆ ಗಟ್ಟಿಯಾಗಿ 'ಕಾಪಾಡ್ರೋ ಕಾಪಾಡ್ರೋ'– ಎಂದು ಬೊಬ್ಬೆ ಹೊಡೆದು ಕೂಗಬೇಕು" ಎಂದನು ಗರಳನಾಭ.



"ಆಮೇಲೆ ಏನು ಮಾಡಬೇಕು ?" ಎಂದು ಕೇಳಿದನು ಸಮೀರ ಏನೂ ಅರಿಯದವನಂತೆ.

"ಆ ನಿಮ್ಮ ಬೊಪ್ಪೆ ಕೇಳಿ ವರ್ತಕರ ವೇಷ ದಲ್ಲಿರುವ ಕಳ್ಳರ ಹಡಗು ನಮ್ಮ ಹಡಗಿನ ಹತ್ತಿರ ಬರುತ್ತದೆ. ಆಗ ನೀವು ಅವರೊಂದಿಗೆ 'ನಮ್ಮ ಹಡಗಿಗೆ ಸಮುದ್ರ ಚೋರರು ಬಿದ್ದು ಕೊಳ್ಳೆಹೊಡೆದರೋಯ್, ಆ ಕಳ್ಳರು ನಮ್ಮ ಹಿರಿಯರನ್ನು ನಾವಿಕರನ್ನೆಲ್ಲಾ ಕೊಂದು ಓಡಿದರಯ್ಯಾ' ಅಂತ ಕೂಗಿ ಅತ್ತು ವಿಲಪಿಸಬೇಕು. ನಿಮ್ಮ ಅಳುವಿಕೆ ನಂಬಿ ಆ ಹಡಗಿನಿಂದ ಕೆಲವರು ನಮ್ಮ ಹಡಗಿಗೆ ಬರುತ್ತಾರೆ. ನೀವು ಅವರನ್ನು ನಾವು ಕುಳಿತಿರುವ ಕೋಣೆಗೆ ಕರೆದುಕೊಂಡು ಬರಬೇಕು. ಆಮೇಲೆ ಮಾಡಬೇಕಾದ್ದನ್ನು ನಾವು ಮಾಡುತ್ತೇವೆ" ಎಂದು ಹೇಳಿದನು ಗರಳನಾಭ.

"ಆಹ ! ಅದ್ಭುತ ಉಪಾಯ !" ಎಂದನೊಬ್ಬ ಹುಡುಗ. ಅತ್ಯದ್ಭುತವೆಂದರು ಉಳಿದ ಹುಡುಗರು.

"ಚೆನ್ನಾಗಿದೆಯಪ್ಪ ? ನಮ್ಮೊಂದಿಗೆ ಸಹಕರಿಸಿದರೆ ನಿಮ್ಮನ್ನು ತಕ್ಕ ರೀತಿಯಲ್ಲಿ ಸನ್ಮಾನಿಸುತ್ತೇವೆ !" ಎಂದನು ಗರಳನಾಭ.

"ಬಹಳ ಸಂತೋಷ. ಆಮೇಲೆ ನೀವು ಅವರನ್ನು ಏನು ಮಾಡುವಿರಿ ? ಹೇಗೆ ಬುದ್ಧಿ ಕಲಿಸುವಿರಿ ?" ಎಂದು ಸಮೀರನು ಕುತೂಹಲ ನಟಿಸಿ ಕೇಳಿದನು.

ಗರಳನಾಭನು ತುಟಿ ಬಿಗಿದುಕೊಂಡು ಸ್ವಲ್ಪ ಹೊತ್ತು ಬಿಮ್ಮಗಿದ್ದು, ದೊಡ್ಡದೊಂದು ಉಸಿರು ಹೊರಡಿಸಿ, "ಆ ದುಷ್ಟರು ಮಾಡಿದ ಘೋರಾಪರಾಧಕ್ಕೆ ಅವರನ್ನೆಲ್ಲಾ ತರತರನೆ ತರಿದು ಹಾಕಿದರೂ ಪಾಪವೇನಿಲ್ಲ. ಆದರೆ ಅವರನ್ನು ಕೊಲ್ಲಲು ನನ್ನ ಮನಸ್ಸು ಒಪ್ಪುವುದಿಲ್ಲ. ಆದಕ್ಕೇ ಅವರ ಹಡಗನ್ನೇ ದೋಚಿಕೊಂಡು ಅವರನ್ನೆಲ್ಲಾ ಬಂಧಿಸಿ ಗುಲಾಮರ ಸಂತೆಯಲ್ಲಿ ಮಾರಿಬಿಡುತ್ತೇವೆ. ಕೊಲ್ಲುವುದಕ್ಕಿಂತ ಅವರನ್ನು ಹಾಗೆ ವಿಕ್ರಯಿಸಿ ಬಿಟ್ಟರೆ ಅವರ ಮೇಲೆ ದಯೆ ತೋರಿಸಿದ ಹಾಗೆ ತಾನೇ ?" ಎಂದು ಹೇಳಿದನು ಗರಳನಾಭ.

ಗುಲಾಮರ ಸಂತೆಯ ಮಾತು ಕೇಳಿದ ಕೂಡಲೇ ಹುಡುಗರಿಗೆಲ್ಲಾ ಭಯವಾಗಿ ನಡುಕವೆದ್ದಿತು.

ಅಷ್ಟರಲ್ಲಿ ಗರಳನಾಭನ ಮುಖ್ಯ ಅನುಚರನು ಒಳಗೆ ಬಂದು, "ಹಡಗು ಕಾಣುತ್ತದೆ !" ಎಂದನು ಬಹಳ ಉತ್ಸಾಹದಿಂದ.

"ಭೇಷ್ ! ನಮ್ಮ ಹಡಗನ್ನು ಬೇಗನೇ ಅದರ ಕಡೆಗೆ ನಡೆಯಿಸು. ಆ ಹಡಗಿನ ಮನುಷ್ಯರು ಕಂಡ ಕೂಡಲೇ ನಮ್ಮವರು ಚುಕ್ಕಾಣಿಗಳನ್ನು ಈ ಹುಡುಗರಿಗೆ ಒಪ್ಪಿಸಿ ಯಾರ ಕಣ್ಣಿಗೂ ಕಾಣದಂತೆ ಎಲ್ಲರೂ ಒಂದು ಕೋಣೆಯೊಳಗೆ ಅಡಗಿಕೊಳ್ಳಬೇಕು. ಓಡು !" ಎಂದು ಆಜ್ಞೆ ಮಾಡಿದನು ಗರಳನಾಭ.

ಗರಳನಾಭನೂ, ಹುಡುಗರೂ ಭೋಜನ ಮುಗಿಸಿ ಕೋಣೆಯಿಂದ ಹೊರಗೆ ಬಂದರು. ದೂರದಲ್ಲಿ ವರ್ತಕರ ಹಡಗು ಕಾಣಿಸಿತು. ವಾಯುವೇಗದಿಂದ

ಪ್ರಯಾಣಿಸುವ ಈ ಹಡಗು ವರ್ತಕರ ಹಡಗು ಸಮೀಪಿಸಿದ ಕೂಡಲೇ ನಾಯಕನ ಆಜ್ಞಾನುಸಾರವಾಗಿ ಕಳ್ಳರು ಚುಕ್ಕಾಣಿಗಳನ್ನು ಹುಡುಗರ ಕೈಗೆ ಕೊಟ್ಟು, ಒಳಗೆ ಹೋಗಿ ಅಡಗಿದರು.

ಸಮೀರನು ಹಡಗಿನ ತೆರೆಚಾಪೆಯ ಕೋಲಿಗೆ ಒರಗಿಕೊಂಡಿದ್ದ ಹಲಗೆಯ ಮೇಲೇರಿ ವರ್ತಕರ ಹಡಗಿನಲ್ಲಿರುವವರಿಗೆ ಕಾಣಿಸುವ ಹಾಗೆ ನಿಂತನು. ಆಗ ತಾನಿರುವ ಕಳ್ಳರ ಹಡಗಿನಿಂದ ಒಂದು ಸಮುದ್ರ ಕಾಕವು ಹಾರಿ ಹೋಗಿ ವರ್ತಕರ ಹಡಗಿನಲ್ಲಿ ಎರಗುವುದನ್ನು ಸಮೀರನು ನೋಡಿದನು. ಕಾಗೆಯ ಮೂಲಕವಾಗಿ ಅದ್ಭುತ ಶಕ್ತಿಯ ಅಪೂರ್ವನು ಏನೋ ಸುದ್ದಿ ಕಳುಹಿಸಿದನೆಂದು ಸಮೀರನು ಅರಿತುಕೊಂಡನು.

ಅದುವರೆಗೂ ಅತ್ತಿತ್ತ ತಿರುಗುತ್ತಿದ್ದ ಗರಳನಾಭನು ತೆರೆಚಾಪೆಯ ಕೋಲಿಗೆ ಕಪ್ಪು ಜಾಂಡಾ ಕಟ್ಟಿ ಸಮೀರನೊಂದಿಗೆ, "ಆ ಹಡಗಿನಿಂದ ಬರುವ ವರ್ತಕ ವೇಷದವರನ್ನೆಲ್ಲಾ ನಾವಿರುವ ಕೋಣೆಯೊಳಗೆ ಕರೆದುಕೊಂಡು ಬರುವುದು ನಿನ್ನ ಬಾಧ್ಯತೆ!" ಎಂದು ಎಚ್ಚರಿಸಿ ಹೇಳಿ ಒಳಗಿನ ಕೋಣೆಗೆ ಹೋಗಿ ತನ್ನ ಸಹಚರರೊಂದಿಗೆ ಕುಳಿತನು.

ಸಮೀರನು ಕೂಡಲೇ ಕೊರಳೆತ್ತಿ "ರಕ್ಷಿಸಿರೋ! ರಕ್ಷಿಸಿರೋ!" ಎಂದು ಬೊಬ್ಬಿಟ್ಟನು.

ಆ ಕೂಗು ಕೇಳಿ ವರ್ತಕರ ಹಡಗಿನ ಕೋಣೆಯೊಳಗೆ ದೊಡ್ಡ ಮನುಷ್ಯನಂತಿದ್ದ ಒಬ್ಬ ವರ್ತಕನು ಹೊರಗೆ ಬಂದನು. ಅವನ ಎರಡು ಬದಿಗಳಲ್ಲಿಯೂ ದೃಢಕಾಯರಾದ ಕೆಲವು ಮಂದಿ ಅಂಗರಕ್ಷಕರಿದ್ದರು.

"ಈ ಹಡಗಿನಲ್ಲಿ ನಾವು ಆರು ಮಂದಿ ಹುಡುಗರಷ್ಟೇ ಇದ್ದೇವೆ. ನಮ್ಮವರನ್ನೆಲ್ಲಾ ಸಮುದ್ರ ಚೋರರು ಕೊಂದುಹಾಕಿ ಬಿಟ್ಟರು. ನಮ್ಮನ್ನು ಕಾಪಾಡಿರಿ! ಕಾಪಾಡಿರಿ!" ಎಂದು ಸಮೀರನು ಆರ್ತಸ್ವರದಲ್ಲಿ ಕೂಗಿದನು.



ಮರುಕ್ಷಣವೇ ವರ್ತಕರ ಹಡಗು ಕಳ್ಳರ ಹಡಗಿನ ಹತ್ತಿರ ಬಂತು. ಇಬ್ಬರು ಮೂವರು ದೃಢಕಾಯರು ಉದ್ದವಾದ ಹಲಗೆಯನ್ನು ತಂದು ಎರಡು ಹಡಗುಗಳನ್ನು ಸೇರಿಸುವ ಸಂಕದಂತೆ ಹಾಕಿದರು. ವರ್ತಕನೂ ಮತ್ತೆ ನಾಲ್ಕು ಮಂದಿ ದೃಢಕಾಯದವರೂ ಈಚೆಗೆ ಬಂದು ಕಳ್ಳರ ಹಡಗಿನೊಳಗೆ ಇಳಿದರು. ವರ್ತಕನು ಸಮೀರನೊಂದಿಗೆ ಮೆಲ್ದನಿಯಿಂದ "ಎಲ್ಲಿ ಅಡಗಿದ್ದಾರೆ ಆ ದುರ್ಮಾರ್ಗಿಗಳು? ಬೇಗನೆ ತೋರಿಸು" ಎಂದು ಕೇಳಿದನು.

ಸಮೀರನು ಕಳ್ಳರು ಅಡಗಿಕೊಂಡಿರುವ ಕೋಣೆಯನ್ನು ತೋರಿಸಿ, "ಬನ್ನಿ ಸ್ವಾಮಿ, ಬನ್ನಿ. ಕಳ್ಳರು ಬಿಟ್ಟು ಹೋದ ಬೆಲೆಬಾಳುವ ಸರಕುಗಳು ಇನ್ನೂ ಕೆಲವು ಆ ಕೋಣೆಯಲ್ಲಿವೆ. ಅವುಗಳೆಲ್ಲವನ್ನೂ ನೀವು ತೆಗೆದುಕೊಂಡು ನಮ್ಮನ್ನು ನಮ್ಮ ಮನೆಗೆ ಸೇರಿಸಿಬಿಡಿರಿ. ಅಷ್ಟು ಮಾಡಿದರೆ ಸಾಕು ಸ್ವಾಮಿ" ಎಂದು ಹೇಳಿದನು.

"ಭಯಪಡಬೇಡಿರಿ ! ನಿಮ್ಮನ್ನು ಕಾಪಾಡಲಿಕ್ಕಾಗಿಯೇ ನಾವು ಬಂದೆವು !" ಎಂದು ವರ್ತಕನು ಕಳ್ಳರಿರುವ ಕೋಣೆಯ ಹತ್ತಿರ ನಡೆದು ರೆಪ್ಪೆ ಮುಚ್ಚುವುದರೊಳಗೆ ಬಾಗಿಲು ಮುಚ್ಚಿ ತಾಳಹಾಕಿ, ಬೀಗ ಜಡಿದು ಬಿಟ್ಟನು.

ಆಮೇಲೆ ಅವನು ಕಿಟಕಿಯ ಮೂಲಕ ಒಳಗಡೆಗೆ ಇಣಿಕಿ ನೋಡುತ್ತ, "ದುಷ್ಟರೇ ! ಇಂದಿಗೆ ನಿಮ್ಮ ಪಾಪ ಹಣ್ಣಾಯಿತು. ನನ್ನೊಂದಿಗೆ ಇಪ್ಪತ್ತೈದು ರಕ್ಷಕರಿದ್ದಾರೆ. ನೀವು ಎಷ್ಟು ಹಡಗುಗಳನ್ನು ದೋಚಿಕೊಂಡಿದ್ದೀರೋ, ಪಾಪದವರನ್ನು ಹಿಂಸಿಸಿ ಕ್ರೂರತನದಿಂದ ಸಮುದ್ರಕ್ಕೆ ಬಲಿ ಹಾಕಿದ್ದೀರೋ ಆ ಪಾಪಗಳ ಫಲವಾಗಿ ಈಗ ಶಿಕ್ಷೆ ಅನುಭವಿಸುವಿರಿ ! ನೀವು ತಪ್ಪಿಸಿಕೊಳ್ಳಬೇಕೆಂದು ಪ್ರಯತ್ನಿಸಿದಿರಾದರೆ ಆ ಕ್ಷಣದಲ್ಲೇ ಈ ನಿಮ್ಮ ಹಡಗು ಭಸ್ಮವಾಗುತ್ತದೆ. ಹಡಗನ್ನು ಸುಟ್ಟು ಹಾಕಲು ಬೇಕಾದಷ್ಟು ಎಣ್ಣೆ ಪೀಪಾಯಿಗಳು ತಯಾರಾಗಿವೆ ! ಕಿಂಕಂ ಅನ್ನದೆ ಹಾಗೆಯೇ ಕುಳಿತಿದ್ದರೆ ಬಚಾವಾಗುವಿರಿ ! ನಾಳೆ ಇಷ್ಟು ಹೊತ್ತಿಗೆ ತೀರ ಸೇರುತ್ತೇವೆ. ಅಷ್ಟು ಹೊತ್ತಿನವರೆಗೂ ನಿಮಗೆ ತಿಂಡಿ ಸಿಗಲಾರದು. ಬೇಕಾದರೆ ಗುಟುಕು ನೀರು ಹೊಯ್ಯುತ್ತೇವೆ. ಕುಳಿತಲ್ಲಿಂದ ಆಚೀಚೆ ಕೈಚಾಚಿದರೆ ಪ್ರಾಣ ಉಳಿಯದು ! ಜಾಗ್ರತೆ !" ಎಂದು ಎಚ್ಚರಿಸಿದನು.

ಕಳ್ಳರಿರುವ ಕೋಣೆಯ ಸುತ್ತಲೂ ಹತ್ತು ಮಂದಿ ಗಟ್ಟಿಮುಟ್ಟಾದ ಕಟ್ಟಾಳುಗಳು ಕಾವಲು ನಿಂತರು, ಮತ್ತೆ ಕೆಲವರು ಕಳ್ಳರ ಹಡಗಿಗೆ ಹಗ್ಗಗಳನ್ನು ಕಟ್ಟಿ ತಮ್ಮ ಹಡಗಿಗೆ ಬಿಗಿದರು. ಸಮೀರನು ಅಪೂರ್ವನಿಗಾಗಿ ಸುತ್ತಲೂ ನೋಡುತ್ತಿರಲು, ವರ್ತಕನು, "ಅಪ್ಪಾ, ನನಗೆ ಆಶ್ಚರ್ಯವಾಗಿದೆ. ನೀವು ಒಂದು ಕಾಗೆಯೊಂದಿಗೆ ಈ ಸುದ್ದಿ ಕಳುಹಿಸಲು ಹೇಗೆ ಸಾಧ್ಯವಾಯಿತು ?" ಎಂದು ಸಮೀರನ ಬೆನ್ನನ್ನು ಮೆಲ್ಲನೆ ತಟ್ಟುತ್ತಾ ಕೇಳಿದನು.

"ಆ ಸಂದೇಶ ಕಳುಹಿಸಿದ್ದು ನಾವಲ್ಲವಯ್ಯಾ. ನಮ್ಮನ್ನು ರಕ್ಷಿಸಲು ಬಂದ ಒಬ್ಬ ದಿವ್ಯ ಪುರುಷನು ಕಳುಹಿಸಿದನು. ಮೂರ್ತಿ ಚಿಕ್ಕದಾದರೂ ಕೀರ್ತಿ ದೊಡ್ಡದು ಎಂಬ ಹಾಗೆ ಅವನು ಕಣ್ಣಿಗೆ ಕಾಣದಷ್ಟು ಚಿಕ್ಕವನು. ಹೆಸರು ಹೊಗಳಿಕೆಗಳ ಮೇಲೆ ಆಶೆಯಿಲ್ಲದವನು. ದೇವಾಂಶದವನು !" ಎಂದನು ಸಮೀರ.

"ಈಗ ಎಲ್ಲಿದ್ದಾನೆ ಆ ಮಹಾನುಭಾವ ?" ಎಂದು ಕೇಳಿದನು ವರ್ತಕ.

"ನಾನರಿಯೆನು ಮಹಾಸ್ವಾಮಿ. ನಮ್ಮನ್ನೆಲ್ಲಾ ಗಮನಿಸಿಕೊಂಡೇ ಇದ್ದಾನೆ. ಬೇಗದಲ್ಲೇ ನಿಮ್ಮ ಹತ್ತಿರ ಬಂದಾನು" ಎಂದನು ಸಮೀರ.

ಎರಡು ಹಡಗುಗಳೂ ವೇಗವಾಗಿ ತೀರದ ಕಡೆಗೆ ಸಾಗುತ್ತಿದ್ದುವು. —(ಇನ್ನೂ ಇದೆ)






## ೮

[ಅಪೂರ್ವನ ಆದೇಶದಂತೆ ಸಮೀರನು ಸಮುದ್ರ ಚೋರರಿಂದ ಐವರು ಹುಡುಗರನ್ನು ಕಾಪಾಡಲು, ಅವನೊಂದಿಗೆ ಗಂಡಮಿಾನಿನ ಮೇಲೇರಿ ಕಳ್ಳರ ಹಡಗನ್ನು ಸೇರಿದನು. ಗರಳನಾಭನ ಒಡೆತನದಲ್ಲಿ ಕಳ್ಳರು ವರ್ತಕರ ಹಡಗನ್ನು ದೋಚಿಕೊಳ್ಳುವ ಎತ್ತುಗಡೆಯ ಪಥಕವು ಅವರನ್ನೇ ಹಿಡಿಸಿ, ಅವರ ಹಡಗು ವರ್ತಕರ ಹಡಗಿಗೆ ಬಿಗಿಯಲ್ಪಟ್ಟು ತೀರ ಸೇರಿತು. ಹೀಗಾಗಲು ಕಾರಣ ಅಪೂರ್ವನೇ ಎಂದನು ಸಮೀರ. ಆಮೇಲೆ—].

ಸಮೀರನಿಂದ ಅಪೂರ್ವನ ಅದ್ಭುತ ಶಕ್ತಿಯು ವೃತ್ತಾಂತ ತಿಳಿದು ಸಮುದ್ರ ವರ್ತಕನು, ಐವರು ಹುಡುಗರನ್ನು ಅವರ ಊರಿಗೆ ಕಳುಹಿಸಿದನು. ಸುರಕ್ಷಿತವಾಗಿ ತಿರುಗಿ ಬಂದ ಮಕ್ಕಳನ್ನು ನೋಡಿ ಅವರ ತಾಯಿ ತಂದೆಯರು ಬಂಧು ಬಳಗದವರು ಆತ್ಮಾನಂದಪಟ್ಟು ಒಬ್ಬರೊಡನೊಬ್ಬರು ಹೇಳಿಕೊಂಡರು. ಸಂಗತಿ ತಿಳಿದು ಊರೆಲ್ಲಾ ಆಶ್ಚರ್ಯದ ಅಲೆಯಲ್ಲಿ ಓಲಾಡಿತು.

ದುಷ್ಟರಾದ ಕಳ್ಳರೆಲ್ಲಾ ಅವರ ಹೊಸ ಒಡೆಯ ಗರಳನಾಭನ ಸಮೇತ ರಾಜನಿಂದ ಕಠಿಣ ಕಾರಾಗಾರದ ಶಿಕ್ಷೆಗೆ ಗುರಿಯಾದರು. ಇದು ಇಡೀ ದೇಶದ ಪ್ರಜೆಗಳಿಗೂ ಸಂತೋಷದಾಯಕವಾಯಿತು. ರಾಜನು ಐವರು ಹುಡುಗರ ಧೈರ್ಯವನ್ನು ತುಂಬಾ ಮೆಚ್ಚಿಕೊಂಡನು. ಹುಡುಗರು ಅದೆಲ್ಲಾ ಸಮೀರನ ಉಪಾಯವೆಂದುದರಿಂದ ಸಮೀರನನ್ನು ರಾಜನು ಘನ ರೀತಿಯಲ್ಲಿ ಸತ್ಕಾರ ಮಾಡಿದನು.

ಆದರೆ ಸಮೀರನಿಗೆ ರಾಜನೇ ಮೊದಲಾದವರ ಹೊಗಳಿಕೆಗಳು ತನಗೆ ಹೊಂದದ ಭಾರವೆನಿಸಿ ತೊಂದರೆಗಿಟ್ಟಿತು. ಏಕೆಂದರೆ, ಅಪೂರ್ವನ ಕರುಣೆಯಿಂದಲೇ ಹುಡುಗರನ್ನು ಸಮುದ್ರ ಚೋರರಿಂದ



ರಕ್ಷಿಸುವಂತಾಗಿತ್ತು. ತಾನು ಅಪೂರ್ವನ ಕೈಯ ಪರಿಕರದಂಥವನು. ಇದು ಅವನಿಗೆ ಮಾತ್ರವೇ ಗೊತ್ತು. ವರ್ತಕನೊಡನೆ ಸ್ವಲ್ಪ ಹೇಳಿದ್ದರೂ ಇಂಗಿತಜ್ಞನಾದ ವರ್ತಕನು ಬಾಯಿ ಬಿಡಲಿಲ್ಲ. ಆದ್ದರಿಂದಲೇ ರಾಜನು ಸಮೀರನನ್ನು ಭಾರೀ ಹೊಗಳಿದ್ದು ಕೇಳಿ ಸಮೀರನಿಗೆ ಬೇಗನೆ ಅಲ್ಲಿಂದ ಹೋಗಿಬಿಡಬೇಕೆನಿಸಿತು.

ಅಂತೂ ಸತ್ಕಾರದ ಗಡಿಬಿಡಿಯ ಸದ್ದೆಲ್ಲ ಅಡಗಿದ ಮೇಲೆ ಸಮೀರನು ತನಗೆ ಬೇಡದಿದ್ದ ಹೊಗಳಿಕೆಯ ಹೊರೆಭಾರವನ್ನು ಹೊತ್ತುಕೊಂಡು ಅವನ ಮನೆಯ ಸಮೀಪದಲ್ಲಿದ್ದ ಪ್ರಶಾಂತವಾದೊಂದು ಜಾಗದಲ್ಲಿ ಒಬ್ಬಂಟಿಗನಾಗಿ ಕುಳಿತನು. ಈ ಹೊಗಳಿಕೆಗಳಿಗೆ ಅನರ್ಹನಾದ ತಾನು ಊರೊಳಗೆ ಹೇಗಿರಲೆಂದು ಚಿಂತಿಸುತ್ತಿದ್ದನು. ಆಗ ಅವನಿಗೆ ಅಪೂರ್ವನು ಹೇಳಿದ ಒಂದು ಮಾತಿನ ನೆನಪು ಬಂತು. ಏಕಾಗ್ರ ಚಿತ್ತದಿಂದ ಯಾವಾಗ ಕರೆದರೂ ತಾನು ಬರುತ್ತೇನೆಂದು ಅಪೂರ್ವನು ಮಾತು ಕೊಟ್ಟಿದ್ದಾನೆ. ಈಗ ಅವನನ್ನು ನೋಡಬೇಕೆಂದು ಸಮೀರನಿಗೆ ತೋರಿತು.

ಕೂಡಲೇ ಸಮೀರನು ಸಮೀಪದಲ್ಲಿದ್ದ ಒಂದು ತೊರೆಯ ಹತ್ತಿರ ಹೋಗಿ ಒಂದು ಬಂಡೆಕಲ್ಲಿನ ಮೇಲೆ ಕುಳಿತು, ಕೈಮುಗಿದು ಅಪೂರ್ವನನ್ನು ನೆನೆದು ಕಣ್ಣುಮುಚ್ಚಿದನೋ ಇಲ್ಲವೋ ಎಂಬಷ್ಟರಲ್ಲಿ "ನಾನಿಲ್ಲಿಯೇ ಇದ್ದೇನೆ ಸಮೀರಾ!" ಎಂಬ ಮಧುರ ಕಂಠಸ್ವರವು ಕೇಳಿಬಂತು.

ಮಂದಹಾಸ ಬೀರುತ್ತ ತನ್ನಿದಿರು ನಿಂತ ಅಪೂರ್ವನ ಹೊಳೆಯುವ ವಿಗ್ರಹವನ್ನು ನೋಡುತ್ತ ಕೈಜೋಡಿಸಿದ ಮುಖದೊಂದಿಗೆ ತಲೆ ಬಗ್ಗಿಸಿದನು ಸಮೀರ.

"ಸಮೀರಾ, ನಮ್ಮೊಳಗೆ ಎಷ್ಟೊಂದು ಒಗ್ಗಟ್ಟು ನೋಡಿದಿಯಾ? ನೀನು ನನ್ನನ್ನು ನೋಡಬೇಕೆಂದು ಕೊಂಡ ಹಾಗೆಯೇ ನಾನೂ ನಿನ್ನನ್ನು ನೋಡ ಬೇಕೆಂದುಕೊಂಡೇ ಇದ್ದೆನು. ಅಂತಲೇ ನಿನ್ನ ಬೆನ್ನು ಬಿದ್ದು ಬಂದಿದ್ದೇನೆ" ಎಂದನು ಅಪೂರ್ವ.

ಸಮೀರನು ಆನಂದಾತಿರೇಕದಿಂದ ರೋಮಾಂಚಿತನಾಗಿ, ಆನಂದಾಶ್ರು ತುಂಬಿದ ಕಣ್ಣುಗಳಲ್ಲಿ, ಗಂಟಲು ಕಟ್ಟಿದಂತಾಗಿ "ಆಹಾ! ಹಾ..." ಎಂಬುದರ ಹೊರತು ಮತ್ತೇನೂ ಹೇಳಲಾಗದೆ ಹೋದನು.

"ಸಮೀರಾ! ನಾವಿಬ್ಬರೂ ಈಗ ಅನುಭವಿಸುವ ಆನಂದವನ್ನು ಲೋಕದ ಜನರೆಲ್ಲರೂ ಅನುಭವಿಸಬೇಕು. ನಮ್ಮ ಆನಂದವನ್ನು ಅವರಿಗೆಲ್ಲಾ ಹಂಚಿಕೊಡುವ ಕೆಲಸ ಮಾಡಬೇಕು. ಅದಕ್ಕೆ ಮೊದಲು ಸಮೀಪದ ಕೆಲಸ ಮುಗಿಸಿ, ಆಮೇಲೆ ದೂರ ಹೋಗಬೇಕು. ನಿನ್ನ ಗ್ರಾಮದೊಳಗಿನ ಬಡ ಜನರ ಪರಿಸ್ಥಿತಿ ತುಂಬಾ ದೀನವಾಗಿದೆ. ಹೊಟ್ಟೆ ತುಂಬಿಸಿಕೊಳ್ಳಲು, ಬಟ್ಟೆ ತೊಟ್ಟುಕೊಳ್ಳಲು ತುಂಬಾ ಪರದಾಟ ಪಡುತ್ತಿದ್ದಾರೆ ಹೌದಾ? ಅನೇಕವಾಗಿ ಎಲ್ಲರೂ ದರಿದ್ರಾವಸ್ಥೆಯಲ್ಲಿ ನಾನಾ ಬಾಧೆಗಳಿಗೆ ಗುರಿಯಾಗುತ್ತಿದ್ದಾರೆ. ಈಗ ನೀನು ಅವರಿಗೇ

ನಾದರೂ ನಿನ್ನಿಂದಾಗುವ ಸಹಾಯವನ್ನು ಮಾಡಲಾರೆಯಾ ? " ಎಂದು ಪ್ರಶ್ನಿಸಿದನು ಅಪೂರ್ವ.

"ನಾನೇನು ಸಹಾಯ ಮಾಡಬಲ್ಲೆನು ಸ್ವಾಮಿ ? ಅವರ ಸಂಕಟಗಳನ್ನು ಹೋಗಲಾಡಿಸಬೇಕೆಂಬ ಆಶೆಯೊಂದು ಕುತ್ತಿಗೆಯ ಗುಣಿಯ ಬರಿಗಿದ್ದರೆ ಮುಗಿಯಿತೆ ? ಕಷ್ಟಗಳಿಗೆ ಕಾರಣ ದರಿದ್ರ ಸ್ಥಿತಿ ಎಂದು ಗೊತ್ತಾಗಿಬಿಟ್ಟರೆ ಸಾಕೇ? ಧನಧಾನ್ಯಗಳೂ ದುಸ್ತು, ದಿರಸುಗಳೂ ಎಲ್ಲಿವೆ ? ಹಣವಿಲ್ಲದೆ ಹೇಗೆ ಬಂದಾವು ? " ಎಂದನು ಸಮೀರ.

"ಹಾಗನ್ನು ! ಕುತೂಹಲ ತುಂಬಾ ಇದೆ ಅನ್ನು ! ಅದಕ್ಕೇ ನಿನ್ನ ಬೆನ್ನು ಹಿಡಿದಿದ್ದೇನೆ ಗೊತ್ತಾ ? ಚಿಂತೆ ಬಿಡು. ನಿನಗೆ ಬೇಕಾದ್ದನ್ನೆಲ್ಲಾ ನಾನು ಒದಗಿಸುತ್ತೇನೆ. ಅದಿರಲಿ, ನನ್ನ ಮೆಚ್ಚಿನ ಮಿತ್ರಾ ! ಸಮೀರಾ ! ನನ್ನನ್ನು ಸ್ವಾಮಿ ಅಂತ ಕರೆಯಬಾರದೆಂದು ಮೊದಲೇ ಹೇಳಿದ್ದೇನೆ. ಅದಕ್ಕೆಲ್ಲ ಅರ್ಹನು ನಾನಲ್ಲ, ಬೇರೊಬ್ಬರು. ಇನ್ನು ಮೇಲೆ ನೀನು ನನ್ನನ್ನು ಹಾಗೆ ಕರೆದರೆ ನಾನು ನಿನ್ನೊಂದಿಗೆ ಮಾತಾಡಲಾರೆ. ನಿನ್ನ ಬಾಯಿಯಿಂದ ಮಿತ್ರಾ ಎನ್ನಿಸಿಕೊಳ್ಳಲಿಕ್ಕೇ ನನಗೆ ಇಷ್ಟ " ಎಂದನು ಎಚ್ಚರಿಸುವ ಧೋರಣೆಯಲ್ಲಿ ಅಪೂರ್ವ.

"ನಿನ್ನಾಜ್ಞೆಯನ್ನು ಶಿರಸಾ ವಹಿಸುತ್ತೇನೆ ಮಿತ್ರಾ ! ಇದು ನನಗೂ ಸಂತೋಷವೇ. ಏಕೆಂದರೆ ಹುಡುಗನಾದ ನನಗಿಂತಲೂ ಗಿಡ್ಡನಾಗಿರುವ ನಿನ್ನನ್ನು ಮಿತ್ರನೆನ್ನಲು ತಕ್ಕಂತೆಯೇ ಇರುವಿ. ಸರಿ, ನನಗೆ ನೀನು ಧನಸಂಪತ್ತು ಹೇಗೆ ಒದಗಿಸುವಿಯೋ ಹೇಳು ಮಾತ್ರ " ಎಂದನು ಸಮೀರ.

"ನಾನು ಸಮುದ್ರ ಚೋರರ ಹಡಗಿನಲ್ಲಿರುವಾಗ ಆ ಚೋರರು ಯಾವುದೋ ಶಿಲಾದ್ವೀಪದಲ್ಲಿ ಅಡಗಿಸಿಟ್ಟಿದ್ದ ನಿಧಿಗಳ ಸಂಗತಿ ಮಾತಾಡಿಕೊಂಡದ್ದು ಕೇಳಿಸಿಕೊಂಡಿದ್ದೇನೆ. ಸುಮಾರು ಹತ್ತು ವರ್ಷಗಳ ಕೆಳಗೆ ಯಾವಳೋ ಯುವರಾಣಿಯೊಬ್ಬಳು ಮದುವೆ



ಮಾಡಿಕೊಂಡು ಗಂಡನ ಮನೆಗೆ ಹೋಗುವಾಗ ದೊಡ್ಡ ಕಳ್ಳರ ಗುಂಪು ಅವರ ಮೇಲೆ ಬಿದ್ದು ಸಕಲ ಆಭರಣಗಳನ್ನು ದೋಚಿಕೊಂಡರಂತೆ " ಎಂದು ಅಪೂರ್ವನು ಹೇಳುತ್ತಿರಲು, ಸಮೀರನು ಅಡ್ಡ ತಡೆದು, " ಹೌದೌದು. ಆ ಸಂಗತಿ ನಮ್ಮ ಹಿರಿಯರು ಕಥೆ ಕಥೆಯಾಗಿ ಹೇಳಿಕೊಳ್ಳುತ್ತಿದ್ದರು " ಎಂದನು ಅತ್ಯಂತ ಉತ್ಕಂಠತೆಯಿಂದ.

"ನಿಜವೇ. ಅನರ್ಘ್ಯವೂ ಅಪೂರ್ವವೂ ಆದ ಮಣಿಮಾಣಿಕ್ಯಗಳಿಂದ ಹೊದುಗಿಸಲ್ಪಟ್ಟ ಯುವರಾಣಿಯ ಆಭರಣಗಳನ್ನೂ, ಇತರರಿಂದ ದೋಚಿಕೊಂಡ ಬಂಗಾರದ ನಗನಾಣ್ಯಗಳನ್ನೂ ಆ ಸಮುದ್ರ ಚೋರರು ಶಿಲಾದ್ವೀಪದ ಗುಹೆಯಲ್ಲಿ ಅಡಗಿಸಿಟ್ಟಿದ್ದಾರಂತೆ. ಅಷ್ಟರಲ್ಲಿ ಆ ಕಳ್ಳರ ಗುಂಪಿನ ಮುಖಂಡರ ಹೆಂಡಂದಿರೊಳಗೆ ಆಭರಣಗಳ ವಿಷಯದಲ್ಲಿ ತಗಾದೆ ಎದ್ದು, ಗುಂಪು ಒಡೆದು ಒಬ್ಬರ ಮೇಲೊಬ್ಬರು ಕತ್ತಿ ಕಟ್ಟಿದರು. ಆ ನಿಧಿ ಪೂರಾ



ತಮಗೇ, ತಮಗೇ ಎಂದು ಎರಡು ಗುಂಪುಗಳ ನಡುವೆ ಘರ್ಷಣೆ ಎದ್ದುದರಿಂದ ನಿಧಿಯನ್ನು ವಶಪಡಿಸಿಕೊಳ್ಳಲು ಸಾಧ್ಯವಾಗದೆ, ಕೆಲವರು ಸತ್ತು ಬಿದ್ದು ಉಳಿದವರು ಓಡಿಹೋಗುವಂತೆ, ಬೇರೊಂದು ಹಡಗಿನವರು ಧಿಮುಧಿಮುವೆಂದು ಅಲ್ಲಿಗೆ ಬಂದರು. ಹಾಗೆ ಬಂದವರಿಗೂ ಚೆಲ್ಲಾಪಿಲ್ಲಿಯಾಗಿ ಬಿದ್ದಿದ್ದ ಕೆಲವಾರು ಶವಗಳಲ್ಲದೆ, ಆ ನಿರ್ಜನ ದ್ವೀಪದಲ್ಲಿ ಹಾವುಗಳಲ್ಲದೆ ಬೇರೇನೂ ಕಾಣಲಿಲ್ಲ. ಹಾಗೆ ತಪ್ಪಿಸಿಕೊಂಡು ಎಲ್ಲೆಲ್ಲೋ ಓಡಿದ ಗುಂಪಿನಲ್ಲಿದ್ದವನು ಹಡಗಿನ ಉಪನಾಯಕ ಗರಳನಾಭ. ಸಮೀರಾ, ಮೊನ್ನೆ ನೀನು ಅವರನ್ನೆಲ್ಲಾ ರಾಜನಿಗೆ ಒಪ್ಪಿಸಿರುವಿ. ಹೇಗಾದರೂ ತಾನು ತಪ್ಪಿಸಿಕೊಂಡರೆ ಆ ಶಿಲಾ ದ್ವೀಪದ ಧನವನ್ನು ವಶಪಡಿಸಿಕೊಂಡು, ಬದುಕು ಸಾಗಿಸಬಹುದೆಂದು ಅವನು ತನ್ನವರೊಂದಿಗೆ ಹೇಳಿಕೊಂಡನು. ಅವರು ಎಷ್ಟು ಗುಸುಗುಟ್ಟಿ ಹೇಳಿಕೊಂಡರೂ ಕೇಳುವ ಶಕ್ತಿ ನನಗಿರುವುದರಿಂದ ಇದು ಗೊತ್ತಾಯಿತು" ಎಂದು ಅಪೂರ್ವನು ಕಿರುನಗುವಿನೊಂದಿಗೆ ಸಮೀರನನ್ನು ನೋಡುತ್ತ ಹೇಳಿದನು.

"ಓಹೋ! ಸುರಕ್ಷಿತವಾಗಿರುವ ಆ ನಿಧಿಯನ್ನು ಈಗ ನಾವು ವಶಪಡಿಸಿಕೊಳ್ಳಬಹುದೆಂದಾಯಿತು!" ಎಂದನು ಸಮೀರ.

"ಹೌದು. ಆದರೆ ಮಿತ್ರ ಸಮೀರಾ, ಅದು ಅಲ್ಲಿ ಬಹಳ ಕಾಲ ಸುರಕ್ಷಿತವಾಗಿರಲಾರದು. ಏಕೆಂದರೆ ಜೀವದಿಂದ ತಪ್ಪಿಸಿಕೊಂಡು ಹೋದ ಇನ್ನೊಂದು ಗುಂಪಿನ ಶತ್ರು ಕಳ್ಳರಿಗೆ, ತಮ್ಮ ಶತ್ರುಗಳು ಕಾರಾಗೃಹದಲ್ಲಿ ಸಿಕ್ಕಿಬಿದ್ದರೆಂದು ಗೊತ್ತಾದ ಕೂಡಲೇ ಅವರು ಆ ನಿಧಿಗಳನ್ನು ವಶಪಡಿಸಿಕೊಳ್ಳಲು ತ್ವರೆಪಡುತ್ತಾರೆ. ಆದ್ದರಿಂದ ನಾವು ಅವರಿಗಿಂತ ಹೆಚ್ಚಿಗೆ ತ್ವರೆಪಡಬೇಕು" ಎಂದನು ಅಪೂರ್ವ.

"ಅದು ಸರಿ, ನಾವೀಗ ಆ ಶಿಲಾದ್ವೀಪವಿರುವ ದಿಕ್ಕು ದೆಸೆ ಕಂಡುಹಿಡಿಯುವುದು ಹೇಗೆ?" ಎಂದನು ಸಮೀರ ಆಲೋಚಿಸುತ್ತ.

"ಮೊನ್ನೆ ನಮ್ಮನ್ನು ಹಡಗಿನ ಹತ್ತಿರ ಕರೆದುಕೊಂಡು ಹೋದ ಗಂಡಮೀನುಗಳಿಗೆ ಆ ಶಿಲಾ ದ್ವೀಪ ಎಲ್ಲಿರುವುದೆಂದು ಗೊತ್ತಿದ್ದೀತು. ನನ್ನ ಆಲೋಚನೆಯನ್ನು ಅರಿತುಕೊಂಡು, ಅದಕ್ಕೆ ಅನುಸಾರವಾಗಿ ನಡೆದುಕೊಳ್ಳುವ ನನ್ನ ಮಿತ್ರ ಪ್ರಾಣಿಗಳು ಅವು. ಈ ವಿಷಯದಲ್ಲಿಯೂ ಅವುಗಳು ನಮಗೆ ಸಹಾಯ ಮಾಡುತ್ತವೆ. ಹಾಗೆ ಮೊದಲಾದುವು ನನ್ನ ಮನಸ್ಸು ಅರಿತುಕೊಳ್ಳುತ್ತವೆ. ನಾಳೆಯೇ ಪೌರ್ಣಮಿಯ ದಿನ. ನಾವು ಶಿಲಾ ದ್ವೀಪದ ಅನ್ವೇಷಣೆಗೆ ಹೊರಡುವ ಶುಭ ದಿನ ನಾಳೆಯೇ" ಎಂದನು ಅಪೂರ್ವ.

ಅಪೂರ್ವನ ಮನಃಶಕ್ತಿಯನ್ನು ಅನುಭವದಿಂದ ಕಂಡ ಸಮೀರನು ಅತ್ಯಂತ ಉತ್ಸಾಹದಿಂದ, "ಹಾಗಾದರೆ ನಮ್ಮೊಂದಿಗೆ ಆ ಐದು ಮಂದಿ ಹುಡುಗ ಮಿತ್ರರನ್ನು ಸಹಾ ಕರೆದುಕೊಂಡು ಹೋಗೋಣವೇ?

ನಿನ್ನನ್ನು ನೋಡಬೇಕೆಂದು ಅವರು ಕೂಡಾ ಕುತೂಹಲ ಪಡುತ್ತಿದ್ದಾರೆ. ನಮ್ಮೊಂದಿಗೆ ಸಾಹಸ ಯಾತ್ರೆ ಹೊರಡಲಿಕ್ಕೂ ಅವರಿಗೆ ಉತ್ಸಾಹವಿದೆ" ಎಂದನು ಪ್ರಶ್ನಾರ್ಥಕವಾಗಿ.

ಅಪೂರ್ವನು ಸ್ವಲ್ಪ ಹೊತ್ತು ಯೋಚಿಸಿ, "ಸರಿ ಬರಲಿ" ಎಂದು ಹೇಳಿ ಹೋಗಿಬಿಟ್ಟನು.

ಸಮೀರನು ಆ ಹುಡುಗರ ತಾಯಿತಂದೆಯರ ಅನುಮತಿ ಪಡೆದು ಮರುದಿನ ಅವರನ್ನು ಕೂಡಾ ತನ್ನೊಂದಿಗೆ ಕರೆದುಕೊಂಡು ಸಾಯಂಕಾಲದ ಹೊತ್ತಿನಲ್ಲಿ ಸಮುದ್ರ ತೀರಕ್ಕೆ ಹೊರಟನು. ಐವರು ಮಿತ್ರರೂ ಅಪೂರ್ವನನ್ನು ನೋಡಲು ತುಂಬಿ ತುಳುಕುವ ಉತ್ಸಾಹದಲ್ಲಿದ್ದರು. ಅವರೆಲ್ಲ ಎಲ್ಲಿ ಸಮುದ್ರ ತೀರ ಸೇರಿದರೋ ಅಲ್ಲಿಯೇ ಇದ್ದನು ಅಪೂರ್ವ! ಐವರು ಹುಡುಗರೂ ಅವನಿಗೆ ನಮಸ್ಕರಿಸಿದರು. ಅವನು ಕಣ್ಣು ಮುಚ್ಚಿ ಬೇರೆ ಯಾರಿಗೋ ನಮಸ್ಕರಿಸಿ, ಆ ಹುಡುಗರ ಕುಶಲ ಕೇಳಿದನು.

ಪೂರ್ವ ದಿಕ್ಕಿನಲ್ಲಿ ಪೂರ್ಣಚಂದ್ರನೆದ್ದು, ಸೊಗಸಾದ ಬೆಳುದಿಂಗಳ ಧಾರೆ ಸುರಿಸುತ್ತಿರಲು, ಅಪೂರ್ವನು ಒಂದು ಕ್ಷಣ ಕಣ್ಣು ಮುಚ್ಚಿಕೊಂಡು ಗಂಡ ಮೀನುಗಳನ್ನು ಸ್ಮರಿಸಿದನು. ಮತ್ತೊಂದು ಕ್ಷಣದಲ್ಲಿ ಸಮುದ್ರ ತೆರೆಗಳಾಚೆಗೆ ಪ್ರಶಾಂತವಾದ ನೀರನ್ನು ಆಕಾಶದೆಡೆಗೆ ಚಿಮ್ಮಿಸುತ್ತ ಗಂಡಮೀನುಗಳು ಹಾರಿ ಬೀಳುವುದು ಕಂಡಿತು! ಸ್ವಲ್ಪ ಹೊತ್ತಿಗೆಲ್ಲಾ ಅವು ತೀರವನ್ನು ಸಮೀಪಿಸಿ, ಪ್ರಯಾಣಕ್ಕೆ ಸಿದ್ಧವಾಗಿರುವುದನ್ನು ತಿಳಿಸುವಂತೆ ವಿಚಿತ್ರ ಶಬ್ದ ಹೊರಡಿಸಿ ತಲೆಯಾಡಿಸಿದುವು. ಅವುಗಳಲ್ಲೇ ದೊಡ್ಡದೊಂದು ಗಂಡಮೀನಿನ ಬೆನ್ನಿನ ಮೇಲೆ ಅಪೂರ್ವನು ಏರಿದನು. ಅವನ ಆಜ್ಞೆಯಾದ ಕೂಡಲೇ ಸಮೀರ ಮತ್ತು ಐದು ಮಂದಿ ಅವನ ಮಿತ್ರ ಹುಡುಗರೂ ಬೇರೆ ಬೇರೆ ಗಂಡಮೀನುಗಳ ಮೇಲೆ ಏರಿ ಕುಳಿತರು.



ಬೇರೆ ಹನ್ನೆರಡು ಗಂಡಮೀನುಗಳು ಅವರನ್ನು ರಕ್ಷಿಸಿಕೊಂಡು ಹೋಗುವಂತೆ ಇಕ್ಕೆಲಗಳಲ್ಲಿ ಕೂಡಿದುವು. ಎಲ್ಲವೂ ಒಂದೇ ಗುಂಪಿನ ಕಟ್ಟುಗಳಂತೆ ಸಮುದ್ರದಲ್ಲಿ ಹಾರಿಕೊಂಡೂ, ಕುಪ್ಪಳಿಸಿ ಧುಮುಕಿಕೊಂಡೂ ಹೋಗತೊಡಗಿದುವು.

ಅಪೂರ್ವನು ಏರಿರುವ ಹೆಗ್ಗಂಡಮೀನು ಉಳಿದವುಗಳಿಗೆ ದಾರಿ ತೋರಿಸುವಂತೆ ಹೋಗುತ್ತಿತ್ತು. ಪ್ರಶಾಂತವಾಗಿರುವ ಸಮುದ್ರ ಗಾಳಿ ಮೆಲ್ಲ ಮೆಲ್ಲನೆ ಬೀಸುತ್ತಿದ್ದಿತು. ಅಪೂರ್ವನ ತಲೆಯ ಮೇಲೆ ಕೆಲವು ಕಾಗೆಗಳು ಗಿಂಗರು ತಿರುಗುತ್ತ ಅನುಸರಿಸಿ ಆಕಾಶದಲ್ಲಿ ದಾರಿ ತೋರಿಸುವಂತೆ ಹಾರುತ್ತಿದ್ದುವು. ಹೀಗೆ ಚಂದ್ರನು ನಡು ನೆತ್ತಿಗೆ ಬರುವ ಸಮಯಕ್ಕೆ ಅವರು ಸಮುದ್ರ ಜಲರಾಶಿಯ ಮಧ್ಯದಲ್ಲಿ ನೆಟ್ಟಗೆದ್ದು ನಿಂತ ರಾಕ್ಷಸರ ಗುಂಪಿನ ಹಾಗಿರುವ ಶಿಲಾದ್ವೀಪವನ್ನು ಸಮೀಪಿಸಿದರು. ಗಂಡಮೀನುಗಳು ಆ ಶಿಲೆಗಳನ್ನು ಆತುಕೊಂಡು ನಿಂತುವು.



ಅಪೂರ್ವನೂ ಉಳಿದ ಆರು ಮಂದಿ ಮಿತ್ರ ಬಾಲರೂ ಗಂಡಮಿಾನುಗಳ ಮೇಲಿನಿಂದ ಇಳಿದು ಶಿಲಾದ್ವೀಪದ ಮೇಲೆ ಅಡಿಗಳನ್ನಿಟ್ಟರು. ದೊಡ್ಡ ದೊಡ್ಡ ಬಂಡೆಗಳ ನಡುವೆ ಅಲ್ಲಲ್ಲಿ ಅನೇಕ ಗುಹೆಗಳಿರುವುದು ಕಾಣಿಸಿದುವು. ಸಮುದ್ರ ಚೋರರು ನಿಧಿಗಳನ್ನು ಅಡಗಿಸಿಟ್ಟ ಗುಹೆ ಯಾವುದೆಂದು ಹೇಗೆ ಕಂಡುಹಿಡಿಯುವುದು ? ಅದು ಅಷ್ಟು ಸುಲಭವಾಗಿ ಕಾಣಲಿಲ್ಲ.

ಹುಡುಗರು ಹಾಗೆಯೇ ಹುಡುಕುತ್ತ ಮುಂದಡಿಯಿಡುವಾಗ ತಮ್ಮ ಮುಂದಿದ್ದ ಒಂದು ಗುಹೆಯೊಳಗೆ ಏನೋ ತಳತಳನೆ ಹೊಳೆಯುವುದು ನೋಡಿದರು. ಅದನ್ನು ತಿಳಿದು ಸಮಿಾರನು ಬಗ್ಗಿ ಗುಹೆಯೊಳಗೆ ತೆವಳಿಕೊಂಡು ಹೋದನು. ಅಲ್ಲಿ ಭುಸುಗುಡುತ್ತಿರುವ ಹಾವುಗಳನ್ನು ನೋಡಿ ಹೆದರಿ ಹಿಂದೆ ಸರಿದು ಬಂದನು. ಅಪೂರ್ವನ ಉಸಿರಿನ ಸ್ಪರ್ಶದಿಂದ ಹಾವುಗಳು ಸುಮ್ಮನಾದುವು.

ಒಬ್ಬ ಹುಡುಗನು "ಸರಿ, ಏನೋ ಶಿಲಾದ್ವೀಪವನ್ನು ಕಂಡುಹಿಡಿದುಬಿಟ್ಟೆವು. ಇನ್ನೊಂದು ಸಾರಿ ಬಂದು ನಿಧಿಯನ್ನು ಹುಡುಕಿಕೊಂಡರಾಯಿತು" ಎಂದು ಸಮಿಾರನಿಗೆ ಸಮಾಧಾನ ಹೇಳುವ ಹಾಗೆ ಬೇಸರವನ್ನು ವ್ಯಕ್ತಪಡಿಸಿದನು.

"ಸುಮ್ಮನಿರಿ ! ಹೀಗೆ ಬಂದು ಅಲ್ಲಿ ಕಾಣುವ ಬಂಡೆಯ ಎಡೆಯಲ್ಲಿ ಅಡಗಿಕೊಳ್ಳೋಣ" ಎಂದು ಪಿಸುಗುಟ್ಟಿ ಅಪೂರ್ವನು ಮುಂದೆ ನಡೆದನು. ಕ್ಷಣಮಾತ್ರದಲ್ಲಿ ಏಳು ಮಂದಿಗಳೂ ಸದ್ದಿಲ್ಲದಂತೆ ಒಂದು ಕಡೆಯಲ್ಲಿ ಅಡಗಿಕೊಂಡರು.

ಬಂಡೆಯ ಆಚೆಯ ಬದಿಯಲ್ಲಿ ಯಾರೋ ಗಟ್ಟಿಯಾಗಿ ನಗುವ ಶಬ್ದ ಕೇಳಿಸಿತು. ಅಪೂರ್ವನು ಜಾಗರೂಕತೆಯಿಂದ ಕೇಳತೊಡಗಿದನು.

"ಅಬ್ಬ ! ಈ ದಿನ ಹತ್ತು ವರ್ಷಗಳ ಮೇಲೆ ನಮ್ಮ ಕನಸು ಫಲಿಸಿ ನಿಧಿ ನಮ್ಮ ವಶವಾಯಿತು. ನಮ್ಮನ್ನು ಅಡ್ಡಪಡಿಸಿದ ಶತ್ರುಗಳೆಲ್ಲಾ ಸತ್ತು ಈಗ ನರಕದಲ್ಲಿ ಬಿದ್ದು ನರಳಿಕೊಂಡಿದ್ದಾರೆ" ಎಂದನು ಮತ್ತೊಬ್ಬನು ನಗುತ್ತಾ.

"ಇನ್ನು ತಡಮಾಡಬಾರದು, ಬೇಗನೇ ಆ ನಿಧಿಯನ್ನೆಲ್ಲಾ ನಮ್ಮ ಹಡಗಿಗೆ ಸೇರಿಸಬೇಕು !" ಎಂದು ಒಬ್ಬನು ದೃಢಸ್ವರದಲ್ಲಿ ಆಜ್ಞೆಯ ಹಾಗೆ ಹೇಳಿದನು.

"ನನಗಂತೂ ಹಸಿವೆ ತಾಳಲಾಗುವುದಿಲ್ಲ. ಮೊದಲು ಹೊಟ್ಟೆ ತುಂಬಾ ಊಟ ತಿಂಡಿ ಮುಗಿಸಿಬಿಡೋಣ. ಆಮೇಲೆಯೇ ಬೇರೆ ಕೆಲಸ. ನಮ್ಮ ವಶದಲ್ಲಿ ಗಟ್ಟಿಯಾಗಿರುವ ನಿಧಿಗಳಿಗೆ ಅಷ್ಟರೊಳಗೆ ರೆಕ್ಕೆ ಬಂದು ಹಾರಿ ಹೋಗುತ್ತೇನು ?" ಎಂದನು ಇನ್ನೊಬ್ಬ ಗಟ್ಟಿ ಸ್ವರದಿಂದ.

"ಮೊದಲು ಬಂದ ಕೆಲಸ ಮುಗಿಯಲಿ. ಇಲ್ಲಿ ಇರುವ ನಿಧಿಯನ್ನೆಲ್ಲ ಹಡಗಿಗೆ ಸೇರಿಸಿ ಆಮೇಲೆ ನೀನು ಹೇಳಿದಂತೆ ಬೇಕಾದ ಹಾಗೆ ಇಷ್ಟಬಂದಂತೆ

ತಿನ್ನಬಹುದು. ಹೊಟ್ಟೆ ಬಿರಿಯುವಂತೆ ಕುಡಿಯಬಹುದು !" ಎಂದು ಆಜ್ಞಾಪಿಸಿದ ಮೊದಲಿನವನು.

ಅಪೂರ್ವನು ಬಂಡೆಯ ಮಧ್ಯದ ಬಿರುಕಿನಿಂದ ನೋಡಿದನು. ಬಂಡೆಯ ಆಚೆಯ ಬದಿಯಲ್ಲಿ ದೃಢಕಾಯರಾದ ಆರು ಮಂದಿ ಇರುವುದು ಕಂಡಿತು. ನಗಗಳು ತುಂಬಿದ ಪೆಟ್ಟಿಗೆಗಳು ಆಚೆಯ ಗುಹೆಯೊಳಗಿನ ಗುಂಡಿಯೊಳಗಿರುವುದೂ ಗೊತ್ತಾಯಿತು. ಸಮುದ್ರ ಚೋರರು ಆ ಪೆಟ್ಟಿಗೆಗಳೊಂದೊಂದನ್ನೇ ತೆಗೆದು ಹಡಗಿಗೆ ಎತ್ತಿಕೊಂಡು ಹೋಗುವುದು ಕಂಡಿತು. ಅವರ ಕೆಲಸ ಮುಗಿಯಲಿಕ್ಕೆ ಅರ್ಧ ಗಂಟೆ ಹೊತ್ತು, ಬೇಕಾಯಿತು.

"ಸರಿ. ಈಗ ಬನ್ನಿ. ಹಾಯಾಗಿ ಕುಳಿತು ಭೋಜನ ಮುಗಿಸೋಣ. ಭೋಜನ ಮಾಡಿ ತುಂಬಿದ ಹೊಟ್ಟೆ ಹೊತ್ತುಕೊಂಡು ಪೆಟ್ಟಿಗೆ ಹೊರುವುದು ಕಷ್ಟವಾಗುತ್ತಿತ್ತು, ಹೌದಾ ? ಇನ್ನು ನಿಧಾನವಾಗಿ ಊಟ ವಿಶ್ರಾಂತಿಗೆ ನಿಶ್ಚಿಂತೆ " ಎಂದನು ಅಧಿಕಾರ ದರ್ಪದ ಆಸಾಮಿ.

"ಹೌದೌದು. ಎಷ್ಟಾದರೂ ನಾಯಕರ ಬುದ್ಧಿ ದೊಡ್ಡದೇ !" ಎಂದು ಒಪ್ಪಿಕೊಂಡು, ಹಡಗಿನಿಂದ ದೊಡ್ಡ ದೊಡ್ಡ ಪಾತ್ರಗಳಲ್ಲಿದ್ದ ಭೋಜನ ಪದಾರ್ಥಗಳನ್ನೂ, ಪಾನೀಯಗಳ ಸೀಸೆಗಳನ್ನೂ ತಂದು ತೀರದಲ್ಲಿಟ್ಟರು ಕಳ್ಳರು. ಅವುಗಳನ್ನೆಲ್ಲಾ ಎತ್ತಿಕೊಂಡು ಅಗಲವಾದೊಂದು ಬಂಡೆಯ ಮೇಲೆ ಹರಡಿಸಿಟ್ಟು, ಸುತ್ತಲೂ ಕುಳಿತು ತಿನ್ನುತ್ತ, ಕುಡಿಯುತ್ತ, ಸಂತೋಷದಿಂದ ಹರಟುತ್ತ, ಹಾಡುತ್ತ, ಹುಚ್ಚು ಹುಚ್ಚಾಗಿ ನಾಟ್ಯವಾಡಿದರು. ಆ ನಿರ್ಜನ ದ್ವೀಪದಲ್ಲಿ ಯಾವ ಭಯವೂ ಅವರಿಗಿರಲಿಲ್ಲ.

"ಬನ್ನಿ ! ನಾವು ತಪ್ಪಿಸಿಕೊಳ್ಳಲು ಇದೇ ತರುಣ !" ಎಂದನು ಅಪೂರ್ವ.

"ಗಂಡಮೀನುಗಳೆಲ್ಲಿವೆ ? " ಎಂದನೊಬ್ಬ ಹುಡುಗ ಸಮುದ್ರ ನೋಡುತ್ತ.

"ಅವು ಸಮುದ್ರದಲ್ಲಿ ಹಾಯಾಗಿವೆ. ನಾವೀಗ ಅಮೂಲ್ಯವಾದ ನಿಧಿಗಳೊಂದಿಗೆ ಆ ಹಡಗಿನಲ್ಲೇ ಪ್ರಯಾಣ ಮಾಡೋಣ ! ಬನ್ನಿ !" ಎಂದು ಅಪೂರ್ವನು ಕಳ್ಳರ ಹಡಗಿಗೆ ಕೈ ತೋರಿಸುತ್ತಾ ಆ ಕಡೆಗೇ ನಡೆದನು.

ಹುಡುಗರೆಲ್ಲಾ ಉತ್ಸಾಹದಿಂದ ಅವನ ಹಿಂದೆಯೇ ಹೋಗಿ ಹಡಗಿನೊಳಗೆ ಏರಿದರು. ಮರುಕ್ಷಣದಲ್ಲಿ ಗಂಡಮೀನುಗಳು ಬಂದು, ತಮ್ಮ ಮುಖಗಳಿಂದ ಹಡಗನ್ನು ದೂಡಲು ಹಡಗು ಕದಲತೊಡಗಿತು. ಕಳ್ಳರೆಲ್ಲ ತಿಂದು ಕುಡಿದಲ್ಲೇ ಮೈಮರೆತಿರುವ ಸಮಯದಲ್ಲಿ ಅವರ ನಿಧಿ ತುಂಬಿದ ಹಡಗನ್ನು ಗಂಡಮೀನುಗಳು ತೀರದ ಬೇರೆ ಕಡೆಗೆ ಸಾಗಿಸಿಕೊಂಡು ಹೋದುವು. —(ಇನ್ನೂ ಇದೆ)





# ಅಪೂರ್ವನ ಸಾಹಸ ಯಾತ್ರೆಗಳು

೯

[ಅಪೂರ್ವನೆಂಬ ವಿಚಿತ್ರದವನು ಸಮುದ್ರ ಚೋರರಿಂದ ಅಪಹರಿಸಲ್ಪಟ್ಟ ಐವರು ಹುಡುಗರನ್ನು ಸಮೀರನ ಮೂಲಕ ರಕ್ಷಿಸಿ ಕಳ್ಳರನ್ನು ಮಹಾರಾಜನಿಗೆ ಒಪ್ಪಿಸಿದನು. ಮತ್ತೊಂದು ಗುಂಪಿನ ಕಳ್ಳರು ನಿಧಿಯನ್ನು ವಶಪಡಿಸಿಕೊಳ್ಳಲು ಶಿಲಾದ್ವೀಪಕ್ಕೆ ಹೋಗಿ ನಿಧಿ ಸಿಕ್ಕಿದ ಸಂತೋಷದಲ್ಲಿ ಕುಡಿದು ಮೈಮರೆತಿರುವಾಗ, ಅಪೂರ್ವನು, ಸಮೀರ ಮತ್ತು ಅವನ ಮಿತ್ರರು ಆ ನಿಧಿಯೊಂದಿಗೆ ಹಡಗಿನಲ್ಲಿ ಹೊರಟುಬಿಟ್ಟರು. —ಆಮೇಲೆ]

ಕಳ್ಳರ ಹಡಗು ಅಪಾರ ನಿಧಿಯೊಂದಿಗೆ ಬಹು ದೂರ ಹೊರಟು ಒಂದು ತೀರವನ್ನು ತಲಪಿತು. ಅದು ತೀರ ತಲಪುವುದನ್ನು ದೂರದಿಂದಲೇ ನೋಡಿದ ಗ್ರಾಮಸ್ಥರು, ಯಾವುದೋ ಹಡಗು ತಮ್ಮ ಊರಿನ ತೀರಕ್ಕೆ ಬರುತ್ತಿರುವುದೆಂದು ಕೂಗಿಕೊಂಡು ಗುಂಪು ಗುಂಪಾಗಿ ತೀರದಲ್ಲಿ ಕೂಡಿದರು. ಅದು ಅವರು ಇದಿರು ನೋಡುವ ಹಡಗೇ ಆಗಿತ್ತು. ಹಡಗಿನಿಂದಿಳಿದು ಬರಲಿದ್ದ ಸಮೀರಾದಿ ಹುಡುಗರನ್ನು ನೋಡಿದ ಕೂಡಲೇ ಗುಂಪಿನಲ್ಲಿದ್ದವರಿಗಾದ ಆನಂದ ಹೇಳತೀರದು.

"ಓ! ಓ! ನಮ್ಮ ಹುಡುಗರೇ! ಬಂದರು! ಬಂದರು!" ಎಂದು ಅಲ್ಲಿ ಸೇರಿದ ಗುಂಪಿನವರು ಕೂಗಾಡಿ ಕೇಕೇ ಹಾಕಿದರು. ಅವರ ಕೂಗು ಕೇಳಿ ಮತ್ತೆ ಅನೇಕರು ಅತ್ಯಾತುರದಿಂದ ಓಡಿಬರ ತೊಡಗಿದರು.

ಭಯಂಕರ ಸಮುದ್ರ ಚೋರರನ್ನು ಹಿಡಿದು ಮಹಾರಾಜನಿಗೆ ವಶಪಡಿಸಿದ, ಸಮೀರ ಮುಂತಾದ ತಮ್ಮ ಹುಡುಗರು ಮತ್ತಾವುದಕ್ಕೋ ಸಮುದ್ರದಲ್ಲಿ ಹೋಗಿರುವರೆಂಬ ವಾರ್ತೆ ಈ ಮೊದಲೇ ಅಲ್ಲೆಲ್ಲಾ ಹರಡಿತ್ತು. ಈಗ ಯಾವ ದೊಡ್ಡ ಕಾರ್ಯ



ಮಾಡಿದರೋ ಎಂದು ತಿಳಿಯುವ ಕುತೂಹಲದಲ್ಲಿ ಎಲ್ಲರಿಗೂ ಒಂದು ಬಗೆಯ ಸಂಭ್ರಮ.

ಆ ಸಮುದ್ರ ತೀರಕ್ಕೆ ಸ್ವಲ್ಪ ದೂರದಲ್ಲಿ ಬಹು ಸುಂದರವಾದೊಂದು ಉದ್ಯಾನವನವೂ, ಅದರ ನಡುವೆ ಚಿಕ್ಕದೂ ಚೊಕ್ಕವೂ ಭವ್ಯವೂ ಆದೊಂದು ಭವನವಿರುವುದೂ ಕಾಣುತ್ತಿತ್ತು. ಮಹಾರಾಜನು ಯಾವಾಗಾದರೊಮ್ಮೆ ವಿಶ್ರಾಂತಿ ತೆಗೆದುಕೊಳ್ಳಲು ಅಲ್ಲಿಗೆ ಬಂದು ಆ ಭವನದಲ್ಲಿ ಕುಳಿತುಕೊಳ್ಳುವ ಪದ್ಧತಿ ಇತ್ತು. ಈಗ ಕೂಡಾ ಮಹಾರಾಜನು ಏನೋ ಸುಯೋಗದಿಂದಾಗಿ ಅಲ್ಲಿಗೆ ಬಂದು ಆ ವಿಶ್ರಾಂತಿ ಭವನದಲ್ಲಿ ಕುಳಿತಿದ್ದನು.

ಆ ಚುರುಕು ಹುಡುಗರು ತೀರಕ್ಕೆ ಬಂದರೆಂಬ ವಾರ್ತೆ ಮಹಾರಾಜನ ಕಿವಿಗೆ ಬಿತ್ತು. ಆ ಹುಡುಗರ ಮೇಲೆ, ಮುಖ್ಯವಾಗಿ ಸಮೀರನ ಮೇಲೆ ಮಹಾರಾಜನಿಗೆ ಅತ್ಯಂತ ಅಭಿಮಾನವಿದ್ದುದರಿಂದ, ಆ ವಾರ್ತೆ ಕೇಳಿದ ರಾಜನು ವಿಶ್ರಾಂತಿಯಿಂದೆದ್ದು ತನ್ನ ಕುದುರೆಯ ಮೇಲೇರಿ ಬೇಗ ಬೇಗನೆ ನಡೆಸಿಕೊಂಡು ಸಮುದ್ರ ತೀರಕ್ಕೆ ಹೊರಟನು.

ರಾಜನ ಹಿಂದೆ ಅಂಗರಕ್ಷಕರಿದ್ದರು. ಮಹಾರಾಜನು ಸಮುದ್ರ ತೀರ ಸೇರುವುದರೊಳಗೆ ಹುಡುಗರ ತಾಯಿ ತಂದೆಯರೂ, ಬಂಧುಮಿತ್ರರೂ ಇತರ ಗ್ರಾಮಸ್ಥರೂ ಮಹಾ ಸಂಭ್ರಮದಲ್ಲಿರುವುದನ್ನು ರಾಜನು ನೋಡಿದನು.

ರಾಜನನ್ನು ಕಂಡ ಕೂಡಲೇ ಎಲ್ಲರೂ ಹುಡುಗರ ಗೊಡವೆ ಬಿಟ್ಟು ವಿನಯ ವಿಧೇಯತೆಯ ಭಕ್ತಿ ಗೌರವಗಳಿಂದ ಬದಿಗೆ ಸರಿದು ನಿಂತು, ರಾಜನಿಗೆ ನಮಸ್ಕಾರ ಮಾಡತೊಡಗಿದರು.

ರಾಜನು ಗ್ರಾಮದ ಹಿರಿಯನೊಬ್ಬನನ್ನು ನೋಡಿ, "ಎಲ್ಲಿದ್ದಾರೆ ಆ ಸಾಹಸೀಗಳಾದ ಹುಡುಗರು? ಎಲ್ಲರೂ ಬಂದಿದ್ದಾರೆಯೋ?" ಎಂದು ಕೇಳಿದನು ಅತ್ತಿತ್ತ ನೋಡುತ್ತ.

"ಅದೋ ಆ ಹಡಗಿನಲ್ಲಿದ್ದಾರೆ ಮಹಾಪ್ರಭೂ. ಎಲ್ಲಿಗೆ ಹೋದರೋ ಏಕೆ ಹೋದರೋ ಗೊತ್ತಾಗಲಿಲ್ಲ. ಅವರು ಇಳಿದು ಬಂದ ಮೇಲೆಯೇ ಅದನ್ನೆಲ್ಲಾ ಕೇಳಬೇಕಷ್ಟೆ" ಎಂದನು ಗ್ರಾಮದ ಹಿರಿಯ ವಿನಯದಿಂದ.

ಸಮುದ್ರದಲ್ಲಿ ನಿಂತ ಹಡಗಿನ ತುದಿಯಲ್ಲಿ ಕುಳಿತು ನೋಡುತ್ತಿದ್ದ ಅಪೂರ್ವನು ತೀರದಲ್ಲಿ ರಾಜನೂ, ಮತ್ತೆ ಹಲವರೂ ಗುಂಪುಗೂಡಿರುವುದನ್ನು ನೋಡಿ ಸಮೀರನೊಂದಿಗೆ, "ಇನ್ನು ನಾನು ಇಲ್ಲಿರಬಾರದು. ಹೋಗುತ್ತೇನೆ. ರಾಜನು ಬಹಳ ಒಳ್ಳೆಯವನು. ನೀನು ತೆಗೆದುಕೊಂಡು ಬಂದಿರುವ ಈ ನಿಧಿಯಷ್ಟೂ ಕೇಳುವವರಿಲ್ಲದ ಕಳ್ಳರು ಕದ್ದ ಜನತೆಯ ಸೊತ್ತು ಎಂದು ಹೇಳು. ಬಡ ಜನರ ಕಷ್ಟಗಳನ್ನು ಹೋಗಲಾಡಿಸಲು ಉಪಯೋಗಿಸಬೇಕೆಂದು ರಾಜನೊಂದಿಗೆ ಬಿನ್ನವಿಸಿಕೋ. ಆ ಕಾರ್ಯಕ್ಕೆ ರಾಜನೇ ತಕ್ಕವನಲ್ಲದೆ ನೀವಲ್ಲ" ಎಂದನು.

ಸಮೀರನು ಹಾಗೆಯೇ ಆಗಲೆಂದು ಒಪ್ಪಿಕೊಳ್ಳುವವನಂತೆ ಅಪೂರ್ವನಿಗೆ ಭಕ್ತಿಯಿಂದ ನಮಸ್ಕಾರ ಮಾಡಿದನು. ಮನಸ್ಸಿನೊಳಗೆ ಈಗಲೇ ಅಪೂರ್ವನು ತನ್ನನ್ನು ಬಿಟ್ಟು ಹೋಗುವನಲ್ಲಾ ಎಂಬ ಕೊರಗಿದ್ದಿತು.

ಅವನ ಮನಸ್ಸನ್ನು ಗ್ರಹಿಸಿಕೊಂಡ ಅಪೂರ್ವನು, "ಮಿತ್ರಾ, ಧೈರ್ಯದಿಂದ ಹೋಗು. ಎಲ್ಲವೂ ಒಳಿತಾಗಿಯೇ ನಡೆಯುತ್ತದೆ. ನಿಧಿ ಸಿಕ್ಕಿತೆಂಬ ಆನಂದದಲ್ಲಿ ಸ್ಮೃತಿತಪ್ಪಿ ಬಿದ್ದಿರುವ ಕಳ್ಳರ ಸಂಗತಿ ಮರೆತುಬಿಡಬಾರದು ಗೊತ್ತಾ? ಅವರನ್ನು ಹಾಗೆಯೇ ಬಿಟ್ಟು ಬಿಟ್ಟರೆ ಸತ್ತು ಹೋದರೂ ಹೋದಾರು. ಅವರನ್ನು ಕಾಪಾಡುವಂತೆ ಮಹಾರಾಜರೊಂದಿಗೆ ಹೇಳು. ಏಕೆಂದರೆ ಆ ಕಳ್ಳರೂ ಆ ಸೊತ್ತಿಗೆ ಹಕ್ಕುದಾರರಲ್ಲ" ಎಂದವನೇ ಸಮುದ್ರಕ್ಕೆ ಹಾರಿಬಿಟ್ಟನು.

ಅವನು ಹಾರಿದ್ದು ಗಂಡಮೀನಿನ ಮೇಲೆಯೇ. ಅದು ಹಡಗಿನ ಹತ್ತಿರವೇ ಕಾದುಕೊಂಡಿತ್ತು. ಕೂಡಲೇ ಆ ಗಂಡಮೀನು ಅಪೂರ್ವನೊಡನೆ ಹಡಗಿನಿಂದ ದೂರದ ಕಡೆಗೆ ಸಾಗತೊಡಗಿತು.

ಸಮೀರನು ಆ ಕಡೆಗೆ ತಿರುಗಿ ನೋಡಿದನು. ರೆಪ್ಪೆ ಬಡಿಯುವುದರೊಳಗೆ ಅದು ಮಹಾ ವೇಗವನ್ನು ಎಬ್ಬಿಸಿಕೊಂಡು ಬಾಣದ ಹಾಗೆ ತೂರಿ ತೂರಿ ಓಡುತ್ತಿತ್ತು.

ಹಡಗು ನಡು ಸಮುದ್ರವು ಪ್ರಾರಂಭವಾಗುವಲ್ಲಿ ಲಂಗರು ಹಾಕಿದ್ದಿತು. ಅಲ್ಲಿ ಅಲೆಗಳು ಕಡಿಮೆಯಾಗಿ, ಸಮುದ್ರ ಜಲವು ಪ್ರಶಾಂತವಾಗಿತ್ತು. ಕೆಲವು ದೃಢಕಾಯರಾದ ಗ್ರಾಮಸ್ಥರು ನೀರಿಗಿಳಿದು ಹುಡುಗರು ಹಡಗಿನಿಂದ ತೀರಕ್ಕೆ ಸೇರಲು ಸಹಾಯ ಮಾಡಿದರು.

ಸಮೀರನು ಮಹಾರಾಜನಿಗೆ ನಮಸ್ಕಾರ ಮಾಡಿ, ಕಳ್ಳರು ಬಹುಕಾಲದಿಂದ ಸಂಗ್ರಹಿಸಿದ್ದ ನಿಧಿಯನ್ನು ಹೇಗೆ ಎತ್ತಿಕೊಂಡು ಬಂದೆವೆಂಬುದನ್ನು ಬಹು ಚುಟುಕಿನಿಂದ ಹೇಳಿದನು. ಅತ್ಯಾಶ್ಚರ್ಯಪಡುತ್ತ ರಾಜನು ಬೇಗ ಬೇಗನೇ ಹಡಗಿನೊಳಗೇರುವ ಸಾಧನ





ಗಳನ್ನು ಏರ್ಪಡಿಸಿ, ಹೋಗಿ ನೋಡಿದನು. ಪೆಟ್ಟಿಗೆಗಳ ತುಂಬಾ ಇರುವ ನಗ ನಾಣ್ಯಗಳನ್ನು, ಅನರ್ಘ್ಯವಾದ ಆಭರಣಗಳನ್ನು ನೋಡಿ ರಾಜನಿಗೆ ಅತ್ಯಾನಂದವೂ ಆಶ್ಚರ್ಯವೂ ಅವಧಿ ಇಲ್ಲದಷ್ಟಾಗುತ್ತಿತ್ತು. ಸಮೀರನು ಬೇಡಿಕೊಂಡಂತೆ, ಆ ನಿಧಿಯನ್ನು ಬಡ ಜನರ ಬಾಧೆಗಳನ್ನು ನಿವಾರಿಸಲು ಉಪಯೋಗಿಸುವೆನೆಂದು ರಾಜನು ಭರವಸೆ ನೀಡಿದನು. ಅಷ್ಟೇ ಅಲ್ಲದೆ, ಅದಕ್ಕೆ ತಕ್ಕ ಪಥಕಗಳನ್ನು ಹಾಕಿ ಕೊಡುವಂತೆ ಸಮೀರನನ್ನೇ ಕೇಳಿದನು ಆ ರಾಜ.

"ಮಹಾಪ್ರಭೂ, ಆ ನಿಧಿಯನ್ನೆಲ್ಲಾ ಇಲ್ಲಿಯ ಆ ವಿಶ್ರಾಂತಿ ಭವನದಲ್ಲಿಯೇ ಭದ್ರಪಡಿಸಿರಿ. ರಾಜಧಾನಿಗೆ ಒಯ್ದು ರಾಜ ಖಜಾನೆಗೆ ಸೇರಿಸಬಾರದು. ಕಳ್ಳಸೊತ್ತು ಖಜಾನೆಯ ನ್ಯಾಯ ಸೊತ್ತಿಗೆ ಸೇರಬಾರದು. ಈ ಪ್ರತ್ಯೇಕ ಭವನದಲ್ಲೇ ಸುರಕ್ಷಿತವಾಗಿರುತ್ತದೆ" ಎಂದನು ಸಮೀರ. "ಸರಿ, ಹಾಗೆಯೇ ಮಾಡಿದರಾಯಿತು" ಎಂದನು ರಾಜ.

"ಇನ್ನೊಂದು ಕೂಡಾ ಮುಖ್ಯವಾದ ವಿಷಯವಿದೆ ಪ್ರಭೂ" ಎಂದನು ಸಮೀರ ಕೈಮುಗಿದು.

"ಏನದು?"—ಕೇಳಿದನು ರಾಜ.

"ಆ ಶಿಲಾದ್ವೀಪದಲ್ಲಿ ಸಿಕ್ಕಿಕೊಂಡಿದ್ದ ಕಳ್ಳರನ್ನು ಅಲ್ಲಿಂದ ಕರೆದುಕೊಂಡು ಬರಬೇಕಾದ್ದು ಕೂಡಾ ಬಹು ಮುಖ್ಯ ವಿಷಯ" ಎಂದನು ಸಮೀರ.

"ಏಕೆ? ಆ ದುಷ್ಟರ ಗೊಡವೆಗೆ ನಾವೇಕೆ ಕಷ್ಟಪಡಬೇಕು?" ಎಂದು ರಾಜನು ನಿರಾಕರಿಸುವಂತೆ ಕೇಳಿದನು.

"ಅನ್ನ ನೀರಿಲ್ಲದೆ ಸಾಯುತ್ತಾರೆ ಪ್ರಭೂ. ಅದು ದೇವರಿಗೆ ಇಷ್ಟವಿಲ್ಲದ್ದು. ತಾವು ಮಾನವರಿಗೆ ದೇವರಂಥವರು" ಎಂದನು ಸಮೀರ.

"ಅವರಿಗೆ ಹೇಗಿದ್ದರೂ ಸಾವೇ ಗತಿಯಾಗುವುದಲ್ಲವೇ? ಕರೆದುಕೊಂಡು ಬಂದರೂ ವಿಚಾರಣೆ ನಡೆಸಿದ ಮೇಲೆ ರಾಜಧರ್ಮದಂತೆ ಮರಣ ಶಿಕ್ಷೆಯೇ ಕೊಡಬೇಕಾಗುತ್ತದೆ. ಅನೇಕಾನೇಕ ಪಾಪದವರನ್ನು ಹಿಂಸಿಸಿ, ಕೊಂದು, ಅನೇಕ ಕುಟುಂಬಗಳ ಸರ್ವನಾಶನ ಮಾಡಿದ ಆ ನರಕಿರಾತಕರಿಗೆ ಅದು ಸರಿಯಾದ ಶಿಕ್ಷೆಯೇ ಆಗುತ್ತದೆ" ಎನ್ನುವಾಗ ಸಮೀರನ ಮುಖ ಬಾಡಿದ್ದು ನೋಡಿ, "ಸರಿ, ನಿನ್ನ ಇಷ್ಟದ ಹಾಗೆ ಅವರನ್ನು ಇಲ್ಲಿ ಕರೆದುಕೊಂಡು ಬರೋಣ" ಎಂದು ಹೇಳಿ ರಾಜನು ಅಂಗರಕ್ಷಕರ ಕಡೆಗೆ ತಿರುಗಿ, ಅವರಲ್ಲಿ ಒಬ್ಬನ ಮೂಲಕ ರಾಜಧಾನಿಗೆ ಆ ಬಗ್ಗೆ ಸಂದೇಶ ಕಳುಹಿಸಿದನು.

ಅನಂತರ ರಾಜಾಜ್ಞೆಯ ಪ್ರಕಾರ ಹಡಗಿನಲ್ಲಿದ್ದ ನಿಧಿಯ ಪೆಟ್ಟಿಗೆಗಳನ್ನೆಲ್ಲಾ ವಿಶ್ರಾಂತಿ ಭವನಕ್ಕೆ ತರಿಸಿ ಜಾಗರೂಕತೆಯಿಂದ ಭದ್ರಪಡಿಸಿ ಇಡಲಾಯಿತು.

ಮಧ್ಯಾಹ್ನದ ಹೊತ್ತಿಗೆ ರಾಜಧಾನಿಯಿಂದ ಐವತ್ತು ಮಂದಿ ಸೈನಿಕರೊಂದಿಗೆ ಎರಡು ದೊಡ್ಡ ಹಡಗುಗಳು ನಿಂತಿರುವ ಹಡಗಿನ ಹತ್ತಿರ ಬಂದು ಸೇರಿದುವು.

ಸಮೀರನೂ, ಅವನ ಮಿತ್ರರೂ ಸೈನಿಕರಿಗೆ ದಾರಿ ತೋರಿಸಲು ಮುಂದಕ್ಕೆ ಬಂದರು. ಖಾಲಿಯಾಗಿದ್ದ ಕಳ್ಳರ ಹಡಗಿನಲ್ಲಿ ಸಮೀರನೂ ಅವನ ಬಾಲ ಮಿತ್ರರೂ ಮತ್ತು ಸೇನಾನಾಯಕನೂ ಏರಿ ಕುಳಿತುಕೊಂಡರು. ಈ ಚೆಂದದಲ್ಲಿ ಕಳ್ಳರ ಹಡಗು ಮುಂದಿನಿಂದಲೂ, ಅದರ ಹಿಂದೆ ಸೈನಿಕರಿರುವ ಎರಡು ಹಡಗುಗಳೂ ಶಿಲಾದ್ವೀಪದ ಕಡೆಗೆ ಹೋಗತೊಡಗಿದುವು.

ಹೀಗೆ ಶಿಲಾದ್ವೀಪವನ್ನು ಸಮೀಪಿಸಿಕೊಂಡಿರುವಾಗ, ಬೆಳಗಾಗಲು ಪ್ರಾರಂಭವಾಯಿತು. ಹಡಗುಗಳನ್ನು ಎಲ್ಲಿ ಲಂಗರು ಹಾಕಿ ನಿಲ್ಲಿಸಬೇಕೆಂದು ಸಮೀರನು ಸೂಚಿಸಿದನು. ಅಲ್ಲಿಗೆ ಕೆಲವು ಗಜಗಳಷ್ಟು ದೂರದಲ್ಲಿಯೇ ಭಯಂಕರ ರಾಕ್ಷಸಾಕಾರಗಳಂತೆ ದೊಡ್ಡ ದೊಡ್ಡ ಬಂಡೆಕಲ್ಲುಗಳು ಎದುರಿಗೆ ನಿಂತಿದ್ದುವು.

ಹಠಾತ್ತಾಗಿ ಒಂದು ಕಲ್ಲು ಹಾರಿ ಬಂದು ಸಮೀರನ ಹತ್ತಿರ ನಿಂತಿದ್ದ ಸೇನಾನಾಯಕನ ಮುಂದೆಯೇ ಬಿತ್ತು. ಬೀಳುವ ಪೆಟ್ಟನ್ನು ಅರಿತು ಬದಿಗೆ ಹಾರಿದ ಸೇನಾನಾಯಕನು "ಓಹ್! ಆ ಮೂರ್ಖರು ನಮ್ಮನ್ನು ಇದಿರಿಸಬೇಕೆಂದಿದ್ದಾರೆ" ಎಂದುಕೊಂಡು ಆ ಬಂಡೆಕಲ್ಲುಗಳ ಕಡೆಗೆ ತಿರುಗಿ, "ಓಹೋಯ್ ಕೇಳಿರೀ! ನೀವು ಎಷ್ಟೇ ಹೋರಾಡಿದರೂ ನಮ್ಮ ಕೈಯಿಂದ ತಪ್ಪಿಸಿಕೊಳ್ಳಲು ಸಾಧ್ಯವಿಲ್ಲ! ನೀವಿರುವುದು ಐದು ಮಂದಿ ಮಾತ್ರವೇ! ನಾವು ಐವತ್ತು ಮಂದಿ ಬಂದಿದ್ದೇವೆ. ಮರ್ಯಾದೆಯಾಗಿ ಶರಣಾಗಿ ಬಿಡಿ! ಒಳ್ಳೆಯದರಲ್ಲಿ ಬಾಗಿ ಬಂದರೆ ನಿಮಗೆ ವಿಧಿಸುವ ಶಿಕ್ಷೆ ಕೂಡಾ ಕಠಿಣವಾಗಿರಲಾರದು, ಇಲ್ಲದೆ ಕೈ ಮೇಲೆತ್ತಿ ಬೀಸಿದಿರಾ, ಸಾವು ತಪ್ಪದು!" ಎಂದು ಕೂಗಿ ಗರ್ಜನಾಧ್ವನಿಯಿಂದ ಹೇಳಿದನು.

ಆದರೂ ಕಲ್ಲುಗಳು ಬಾಣಗಳ ಹಾಗೆ ರಿವ್ವರಿವ್ವನೆ ಬಂದು ಬೀಳತೊಡಗಿದುವು.

"ಹೂಂ, ಬಿಡಿರಿ!..." ಎಂದು ಸೈನಿಕರಿಗೆ ಸೇನಾಪತಿಯ ಆಜ್ಞೆಯಾಯಿತು.





ಸೈನಿಕರು ಎತ್ತರವಾದ ಬಂಡೆಗಳ ಮೇಲೆ ಹತ್ತಿ ಸುತ್ತುಮುತ್ತಲೂ ನೋಡಿದರು. ಕಳ್ಳರ ಸುಳಿವೇ ಗೊತ್ತಾಗಲಿಲ್ಲ. ಗಫ್‌ಚಿಪ್ ನಿಶ್ಶಬ್ದ !

"ಆ ಹೇಡಿಗಳು ಯಾವ ಗುಹೆಯೊಳಗೋ ಅಡಗಿಕೊಂಡಿರಬಹುದು" ಎಂದು ಸೇನಾಧಿಪತಿ ಹತ್ತು ಮಂದಿ ಸೈನಿಕರನ್ನು ದ್ವೀಪದ ಮುಖದಲ್ಲಿ ಕಾವಲು ನಿಲ್ಲಿಸಿ, ಉಳಿದ ಸೈನಿಕ ಮಂದಿಗಳಲ್ಲಿ ಐದೈದು ಮಂದಿಗಳ ಎಂಟು ಗುಂಪುಗಳಾಗಿ ವಿಂಗಡಿಸಿ ದ್ವೀಪದಲ್ಲಿರುವ ಎಲ್ಲಾ ಗುಹೆಗಳನ್ನೂ ಹುಡುಕಲು ಆಜ್ಞೆ ಮಾಡಿದನು.

ಸಮೀರನೂ ಅವನ ಮಿತ್ರರೂ ಹಡಗಿನೊಳಗೆ ನಿಂತು, ದ್ವೀಪದಲ್ಲಿ ನಡೆಯುವ ಶೋಧನೆಯ ಆಟಗಳನ್ನು ಆಸಕ್ತಿಯಿಂದ ನೋಡುತ್ತಿದ್ದರು.

ಫಕ್ಕನೆ "ಸಮೀರಾ !" ಎಂಬ ಮಧುರ ಸ್ವರವು ಕೇಳಿಸಿತು.

ಮರುಕ್ಷಣವೇ ಕಲ್ಲುಗಳು ಬರುವ ದಿಕ್ಕಿನ ಕಡೆಗೆ ಒಮ್ಮೆಗೇ ಐವತ್ತು ಬಾಣಗಳು ಹಾರಿ ತೂರಿ ಹೋದುವು !

ಆಮೇಲೆ ಕಲ್ಲುಗಳು ಹಾರಿ ಬರುವುದು ತಗ್ಗಿತು. ಹಡಗುಗಳು ಸುಲಭವಾಗಿ ರಾಕ್ಷಸ ಬಂಡೆಗಳನ್ನು ಸಮೀಪಿಸಿದುವು.

ಸೇನಾನಾಯಕನು ಸಮೀರನೊಂದಿಗೆ, "ನೀನೂ ನಿನ್ನ ಮಿತ್ರರೂ ಆ ಕಳ್ಳರ ಕಣ್ಣಿಗೆ ಬೀಳದಂತೆ ಈ ಹಡಗಿನೊಳಗೇ ಕುಳಿತಿರಿ. ನಾವು ಹೋಗಿ ಆ ದುಷ್ಟರನ್ನು ಬಂಧಿಸುತ್ತೇವೆ" ಎಂದು ಹೇಳಿ ಕೆಳಗೆ ಇಳಿದನು.

ಇಳಿಯುತ್ತಾ ಸೇನಾನಾಯಕನು ಮತ್ತೊಂದು ಸಾರಿ ಕಳ್ಳರಿಗೆ ಶರಣಾಗಿ ಬಿಡುವಂತೆ ಎಚ್ಚರಿಕೆಯ ಕೂಗು ಕೊಟ್ಟನು. ಅದು ಬಂಡೆಗಳಲ್ಲಿ ಪ್ರತಿಧ್ವನಿಸಿಕೊಂಡು ಹೋಯಿತು. ಆದರೂ ಆ ಕಡೆಯಿಂದ ಯಾವ ಮಾರ್ನುಡಿಯೂ ಬರಲಿಲ್ಲ.

ಸಮೀರನು ಆ ಕಡೆಗೆ ಮುಖ ತಿರುಗಿಸಿದನು.

ಅಪೂರ್ವನು ಒಂದು ಬಂಡೆಯ ಮೇಲೆ ಮುಗುಳು ನಗು ಪ್ರಕಾಶಿಸುತ್ತಾ ನಿಂತಿರುವುದು ಸೂರ್ಯ ಪ್ರಕಾಶದಲ್ಲಿ ಹೊಳೆದು ಕಾಣಿಸಿತು. ಅವನ ಸನ್ನೆಯೂ ಸಮೀರನಿಗೆ ಅರ್ಥವಾಯಿತು.

ಸಮೀರನು ಅತ್ಯಂತ ಉತ್ಸಾಹದಿಂದ ಹಡಗಿನಿಂದ ಕೆಳಗೆ ಹಾರಿ ಕ್ಷಣಮಾತ್ರದಲ್ಲಿ ಸೇನಾನಾಯಕನನ್ನು ಸಮೀಪಿಸಿದನು.

"ನಿನ್ನನ್ನು ಹಡಗಿನೊಳಗೇ ಇರಲು ಹೇಳಿದೆ ನಲ್ಲಾ? ಹೀಗೇಕೆ ಬಂದಿಯಾ?" ಎಂದು ಸೇನಾನಾಯಕನು ಕೇಳಿದನು.

"ಅದೇನೋ ನಿಜವೇ ಅಯ್ಯಾ. ಈಗ ಒಂದು ಮುಖ್ಯ ವಿಷಯ ಹೇಳಲಿಕ್ಕೇ ಬಂದೆನು. ಕಳ್ಳರು ಐದು ಮಂದಿಗಳೂ ಈ ದ್ವೀಪದ ಮೂಡು ದಿಕ್ಕಿನಲ್ಲಿರುವ ಒಂದು ಸುರಂಗದೊಳಗೆ ಅಡಗಿಕೊಂಡಿದ್ದಾರೆ" ಎಂದನು ಸಮೀರ.

"ಆ ಸಂಗತಿ ನಿನಗೆ ಹೇಗೆ ಗೊತ್ತಾಯಿತು? ಮರೆಮಾಚದೆ ನಿಜವನ್ನು ಹೇಳು" ಎಂದು ಸೇನಾ ನಾಯಕನು ಅತ್ಯಾಶ್ಚರ್ಯದಿಂದ ಕೇಳಿದನು.

"ಅದು ನಾವು ಮೊದಲು ನಿಧಿಯನ್ನು ಹೇಗೆ ಕಂಡುಹಿಡಿದೆವೋ, ಕಳ್ಳರಿಂದ ಹೇಗೆ ತಪ್ಪಿಸಿಕೊಂಡೆವೋ ಹಾಗೆಯೇ ಈಗ ಇದು ಕೂಡಾ ಗೊತ್ತಾಯಿತು! ಆ ರಹಸ್ಯ ಹೇಳಲು ನಾನು ಶಕ್ತನಲ್ಲ. ಒತ್ತಾಯಿಸಬೇಡಿ!" ಎಂದನು ಮುಗುಳು ನಗುತ್ತಾ, ಸಮೀರ.

ಸಮೀರನು ನಿಜವನ್ನೇ ಹೇಳುವನೆಂದು ಸೇನಾ ನಾಯಕನು ಸಮೀರನ ಖಂಡಿತ ಸ್ವರದಿಂದ ಅರಿತುಕೊಂಡನು. ಕೂಡಲೇ ಅವನು ಹತ್ತು ಮಂದಿ ಸೈನಿಕರನ್ನು ಸಮೀರನು ಸೂಚಿಸುವ ಸುರಂಗದ ಕಡೆಗೆ ನಡೆಯಿಸಿದನು.

ಆ ಸುರಂಗದ ದ್ವಾರವು ಹತ್ತಿರ ಬಂದ ಕೂಡಲೇ "ಓ ಕಳ್ಳರೇ! ನೀವು ಅಡಗಿರುವ ಸ್ಥಳ ತಿಳಿದು ಹೋಯಿತು. ಈಗಾದರೂ ಗುಟ್ಟನಲ್ಲಿ ವಶಪಡುವಿರಾ? ಅಲ್ಲ ನಮ್ಮ ಬಾಣಗಳಿಗೆ ಗುರಿಯಾಗಿ ಸಾಯುವಿರಾ?" ಎಂದು ಸೇನಾನಾಯಕನು ಈಗಲೂ ಎಚ್ಚರಿಸಿದನು.

"ಸಾವು ನಮಗಲ್ಲ ನಿಮಗೇ! ಯಾರಾದರೂ ಸುರಂಗದೊಳಗೆ ಕಾಲಿಟ್ಟರಾ — ನಿಮ್ಮಗಳ ಪ್ರಾಣ ಉಳಿಯದು! ಜಾಗ್ರತೆ!" ಎಂದು ಒಳಗಿದ್ದ ಕಳ್ಳರ ನಾಯಕನಂಥವನು ಗರ್ಜಿಸಿ ಹೇಳಿದನು.

ಮರುಕ್ಷಣವೇ ಆ ಸುರಂಗದೊಳಗಿನಿಂದ ಅತಿ ಭಯಂಕರ ವಿಕೃತ ಗರ್ಜನೆಯೊಂದು ಹೊರಟಿತು: "ಕಪ್ಪು ಕರಿಯ ವಿಷ ನಾಗರಗಳ ನಿಲಯದೊಳಗೆ ಅಡಗಿರುವ ಮೂರ್ಖರೇ! ಇನ್ನೊಂದು ನಿಮಿಷ ತಡೆದರೆ ನೀವೆಲ್ಲಾ ವಿಷದ ಕಚ್ಚಿನಿಂದ ಸತ್ತು ಮಸಿಯಾಗುವಿರಿ! ಜೀವದಾಸೆಯಿದ್ದರೆ, ಓಡಿರಿಲ್ಲಿಂದ!"

ನಾಗರಹಾವುಗಳಿಗಿಂತಲೂ ಘೋರವಾದ ಕರಿ ನಾಗರಗಳ ಹೆಸರು ಕೇಳುತ್ತಲೇ ಕಳ್ಳರು ಉಂಗುಷ್ಟದಿಂದ ನೆತ್ತಿಯವರೆಗೂ ನಡುಗಿದರು. ಈ ಕಾರ್ಗತ್ತಲೆಯ ಸುರಂಗದೊಳಗೆ ಈ ಎಚ್ಚರಿಸುವ ಮಾನವ ಮಾತ್ರನು ಹೇಗೆ ಬಂದನು? ಇದಾವುದೋ ಗುಹೆಯನ್ನು ಆಕ್ರಮಿಸಿಕೊಂಡ ಭೂತದ ಎಚ್ಚರಿಕೆ— ಎಂದು ಕಳ್ಳರಿಗೆ ತೋರಿತು.

"ಶರಣಾಗತರಾಗೋಣ!" ಎಂದನು ಕಳ್ಳರ ನಾಯಕ.

ಕಳ್ಳರು ಒಬ್ಬರ ಹಿಂದೊಬ್ಬರಂತೆ ಸುರಂಗದೊಳಗಿನಿಂದ ಹೊರಗೆ ಬಂದರು. ಎಲ್ಲರ ಬರಿಗೈಗಳೂ ಮೇಲೆತ್ತಿಕೊಂಡಿದ್ದುವು! ಹಾಗೆ ಬಂದು ತಲೆತಗ್ಗಿಸಿ ನಿಂತ ಕಳ್ಳರ ಕೈಗಳನ್ನು ಸೈನಿಕರು ಹಿಂಗಟ್ಟು ಹಾಕಿ ಮುರಿಗಟ್ಟಿದರು. —(ಇನ್ನೂ ಇದೆ)






## ೧೦

[ಅಪೂರ್ವನು ಸಮೀರನನ್ನು ಸಮುದ್ರ ಚೋರರಿಂದ ಕಾಪಾಡಿದನು. ಅಪೂರ್ವನ ಆದೇಶದಂತೆ ಸಮೀರನು ಸಮುದ್ರ ಚೋರರ ಪಾಲಿಗೆ ಬಿದ್ದ ಐವರು ಹುಡುಗರನ್ನು ಕಾಪಾಡಿದನು. ಶಿಲಾ ದ್ವೀಪದಲ್ಲಿ ಕಳ್ಳರು ಅಡಗಿಸಿಟ್ಟ ನಿಧಿಯನ್ನು ಅಪೂರ್ವನು ಹೇಳಿದಂತೆ ಜನರ ಉಪಯೋಗದ ಕಾರ್ಯಗಳಿಗಾಗಿಯೇ ಬಳಸಬೇಕೆಂದು ಸಮೀರನು ಹೇಳಿದನು. ಹಾಗೆಯೇ ರಾಜನು ಚೋರರನ್ನು ಕೊಲ್ಲದೆ ಬಂದೀ ಮಾಡಿಸಿದನು. ಅನಂತರ—]

ಅಂತಹ ಸಮುದ್ರ ಚೋರರನ್ನು ವಿಚಾರಣೆಗೆ ಒಳಪಡಿಸಬೇಕಾದ್ದು ರಾಜಧರ್ಮವಾಯಿತು. ಹಾಗೆ ವರ್ತಕರ ಹಡಗುಗಳನ್ನು ಕೊಳ್ಳೆ ಹೊಡೆಯುವವರೂ, ದಾರಿದೋಚುವ ಕೊಳ್ಳೆಗಾರರೂ ಬಂದೀಗಳಾಗಿ ಸಿಕ್ಕಿಬಿದ್ದುದರಿಂದ ರಾಜ್ಯದಲ್ಲಿ ಕಳ್ಳರ ಭಯವು ಬಹಳ ಮಟ್ಟಿಗೆ ತಗ್ಗಿತು. ಅದ್ಭುತ ಶಕ್ತಿಗಳಿರುವ ಯಾವನೋ ದಿವ್ಯ ಪುರುಷನು ಒಳ್ಳೆಯವರಿಗೆ ರಕ್ಷಕನಾಗಿರುವನೆಂದು, ಅವನು ಕಣ್ಣಿಗೆ ಕಾಣದ ದೇವನೇ ಆಗಿರುವನೆಂದು ವದಂತಿ ಎಲ್ಲೆಲ್ಲೂ ಹಬ್ಬಿತು. ದುಷ್ಟತನ ಮಾಡಲು ಎಲ್ಲರಿಗೂ ಭಯವಾಯಿತು. ಹೀಗಾಗಿ ವಂಚನೆ, ಮರೆಮೋಸಗಳೆಲ್ಲಾ ತಗ್ಗಿಹೋದುವು. ದೊಡ್ಡ ದೊಡ್ಡ ಧನಿಕದರ್ಪದವರೂ ಅಪೂರ್ವನ ಅದೃಶ್ಯ ಶಕ್ತಿಗೆ ಹೆದರಿದರು. ಬಂದೀಖಾನೆಯ ಕಳ್ಳರೂ ಒಳ್ಳೆಯವರಾಗುವಂತಾಯಿತು.

ರಾಜನು ಇಂತಹ ಸುಪರಿಣಾಮಕ್ಕೆ ಕಾರಣನಾದ ಸಮೀರನನ್ನು ತನ್ನ ಸಲಹಾದಾರನನ್ನಾಗಿ ನಿಯಮಿಸಿಕೊಂಡನು. ಎಂತಹ ಕೆಟ್ಟ ಸಂಗತಿಯೂ ಇಲ್ಲದಂತೆ ಕಾಲವು ಕ್ರಮಿಸಿಕೊಂಡಿದ್ದಿತು.

ಇನ್ನು ತಾನೇನು ಮಾಡಬೇಕೆಂದು ಅಪೂರ್ವನಿಗೆ ಗೊತ್ತಾಗಲಿಲ್ಲ. ಉದ್ದೇಶ ಸಿದ್ಧಿಸಿತೆಂದು ಅಪೂರ್ವ



ನಿಗೆ ತೃಪ್ತಿ. ತನ್ನ ಜನ್ಮಕಾರಣನಾದ ತಂದೆಗೂ ಇದನ್ನು ಹೇಳಿ ತೃಪ್ತಪಡಿಸಬೇಕೆಂದುಕೊಂಡು ಅವನು ಹಿಮಾಲಯಕ್ಕೆ ಹೋದನು. ಗುಹೆಯೊಳಗೆ ಸದಾನಂದ ಮುನಿ ಧ್ಯಾನಮಗ್ನನಾಗಿರುವುದನ್ನು ನೋಡಿ, ತಾನೂ ಗುಹೆಯ ಹೊರಗೆ ಧ್ಯಾನಮಗ್ನನಾಗಿ ಕುಳಿತುಬಿಟ್ಟನು. ಹೀಗೆ ತಾನು ಇಂಥಲ್ಲಿ ಧ್ಯಾನ ಮಾಡಿಕೊಂಡಿರುವೆನೆಂದು ಸಮೀರನಿಗೆ ಮಾತ್ರ ತಿಳಿಸಿದ್ದನು. ಅಗತ್ಯ ಬಿದ್ದಾಗ ಏಕಾಗ್ರಚಿತ್ತದಲ್ಲಿ ನೆನೆಸಿದರೆ ಮರುಕ್ಷಣದಲ್ಲಿ ಪ್ರತ್ಯಕ್ಷನಾಗುವೆನೆಂದು ಸಮೀರನಿಗೆ ವರ ಕೊಟ್ಟಿದ್ದನು ಅಪೂರ್ವ.

ಒಂದು ದಿನ ಸದಾನಂದ ಮುನಿ ಅಪೂರ್ವನನ್ನು ತನ್ನ ಹತ್ತಿರಕ್ಕೆ ಕರೆದು, "ಕಂದಾ, ಅಪೂರ್ವ, ನಿನಗಿಂತ ಮೊದಲು ಎಷ್ಟೋ ಋಷಿ ಮುನಿಗಳು ಯೋಗಿಗಳು, ಯೋಗ ಮಾಯಾ ವಿದ್ಯೆಗಳನ್ನೆಲ್ಲಾ ಅಭ್ಯಾಸ ಮಾಡಿ ಪರಿಪೂರ್ಣತೆ ಸಾಧಿಸಿಕೊಂಡಿದ್ದಾರೆ. ಅಂಥವುಗಳನ್ನು ನೀನು ಮತ್ತೆ ಸಾಧಿಸಬೇಕಾಗಿಲ್ಲ. ಆ ಶಕ್ತಿಗಳೆಲ್ಲವೂ ನಿನ್ನಲ್ಲಿವೆ. ಇದುವರೆಗೆ ನೀನು ಮಾಡಿದ್ದೆಲ್ಲಾ ನನಗೆ ಗೊತ್ತಾಗಿದೆ. ಆದ್ದರಿಂದ ವಿಶಿಷ್ಟವಾದ ಕರ್ತವ್ಯವನ್ನು ಸಾಧಿಸಬೇಕಾದ ಬಾಧ್ಯತೆಗಳು ಈಗ ನಿನಗಿರುತ್ತವೆ. ಇಕೋ, ನಾನು ಸಾಧಿಸಿಕೊಂಡಿರುವ ಹೆಚ್ಚಿನ ಶಕ್ತಿಗಳನ್ನು ಕೂಡಾ ನಿನಗೇ ಕೊಡುತ್ತೇವೆ. ಆ ವಿಶಿಷ್ಟವಾದ ಕಾರ್ಯವನ್ನು ಕೂಡಾ ನೀನೇ ಸಾಧಿಸಬೇಕು. ಮುಖ್ಯವಾಗಿ ಮಾನವ ಜಾತಿಯ ಅಭ್ಯುದಯಕ್ಕಾಗಿ ಮಾತ್ರ ಅದನ್ನು ಉಪಯೋಗಿಸಿಕೊಳ್ಳಬೇಕು" ಎಂದನು.

"ಹೊಸತಾಗಿ ತಾವೇನು ಹೇಳುವಿರಿ? ನಾನು ಮೊದಲಿನಿಂದಲೂ ಅದನ್ನೇ ಮಾಡುತ್ತಿದ್ದೇನಲ್ಲಾ? ಒಂದುವೇಳೆ ತಮ್ಮ ಅಪೇಕ್ಷೆಗೆ ತಪ್ಪಾಗಿ ನಾನೇನಾದರೂ ಮಾಡಿದೆನೇ?" ಎಂದು ವಿನಯದಿಂದ ಕೇಳಿದನು ಅಪೂರ್ವ.

"ಅದೇನೂ ಇಲ್ಲಪ್ಪಾ. ನಾನು ಸಂಕಲ್ಪಿಸಿದವುಗಳನ್ನೆಲ್ಲಾ ನೀನು ಸರಿಯಾಗಿಯೇ ನೆರವೇರಿಸಿರುವಿ. ನಿನ್ನನ್ನು ನೋಡುವಾಗ ನನಗೆ ಹೇಳಲಾಗದಷ್ಟು ಆನಂದವಾಗುತ್ತದೆ" ಎಂದನು ಸದಾನಂದ ಮುನಿ.

"ಧನ್ಯನಾದೆನು ಮಹಾತ್ಮರೇ, ಪ್ರಸ್ತುತದಲ್ಲಿ ರಾಜ್ಯಗಳಲ್ಲೆಲ್ಲಾ ಎಲ್ಲವೂ ಸರಿಯಾಗಿಯೇ ಸಾಗುತ್ತಿವೆ. ಚಿಕ್ಕ ಚಿಕ್ಕ ಸಮಸ್ಯೆಗಳಿದ್ದರೂ ಅವುಗಳನ್ನು ಜನರೇ ತಮ್ಮೊಳಗೆ ಪರಿಷ್ಕರಿಸಿಕೊಳ್ಳುವಂಥವುಗಳೇ. ಮಾನವರ ಜೀವನದಲ್ಲಿ ಪ್ರಯತ್ನವು ಮುಖ್ಯವಾದುದು ತಾನೇ? ಯಾವಾಗಲೂ ಒಂದು ಹೋರಾಟವಿದ್ದರೇನೇ ಹಸಿವೆ ನೀರಡಿಕೆಗಳಾಗುತ್ತವೆಂದು ತಾವು ತಿಳಿಯದ್ದಲ್ಲವಷ್ಟೇ? ಅದಕ್ಕೆಲ್ಲಾ ಅದ್ಭುತ ಶಕ್ತಿಗಳೇಕೆ?" ಎಂದನು ಅಪೂರ್ವ.

"ನೀನು ಹೇಳಿದ್ದೇನೋ ನಿಜವೇ. ಆದರೆ ಮಾನವ ಸ್ವಭಾವ ಒಂದೇ ರೀತಿಯಾಗಿರುವುದಿಲ್ಲ. ಶಾಂತಿಯುತವಾಗಿರುವುದಕ್ಕೆ ಕೆಲವರಿಗೆ ಹಿಡಿಸುವುದಿಲ್ಲ. ಅವರಿಗೆ ಯಾವಾಗಲೂ ಏನೋ ಒಂದು ಕಠಿಣ

ಪರಿಸ್ಥಿತಿ ಬೇಕು. ಇಲ್ಲದಿದ್ದರೆ ಇಂಥವರಿಗೆ ನಿದ್ದೆ ಬಾರದು" ಎಂದನು ಸದಾನಂದ ಮುನಿ.

ಅಪೂರ್ವನು ಮುನಿಯನ್ನು ಕುತೂಹಲದಿಂದ ನೋಡುತ್ತಾ, "ಏನು ಹೇಳುವಿರಿ ಮಹಾನುಭಾವಾ, ಅಂಥವರಾರಾದರೂ ಎಲ್ಲಿಯಾದರೂ ಇದ್ದಾರೆನ್ನು ವಿರಾ? ನಿಮ್ಮ ನೆನಪಿಗೆ ಬರುವಂಥ ಅಂಥಾ ಮುಖ್ಯದವರು ಯಾರು?" ಎಂದು ಕೇಳಿದನು.

"ಹೌದಪ್ಪಾ ಹೌದು. ನೀನು ಒಳ್ಳೆಯ ಮಾರ್ಗಕ್ಕೆ ತಿರುಗಿಸಿದ ಕಳ್ಳರಿಗಿಂತಲೂ, ಕೊಳ್ಳೇಗಾರರಿಗಿಂತಲೂ ಅಪಾಯಕಾರಿಯಾದವರು. ಕೊಳ್ಳೆಗಾರರಂಥವರೆಲ್ಲಾ ಸಾಧಾರಣ ಮನುಷ್ಯರು. ಅವರ ಕೆಲಸ ಎಲ್ಲರಿಗೂ ತಿಳಿಯುವ ಹಾಗಿರುತ್ತದೆ. ಆದರೆ ಈಗ ನಾನು ಹೇಳುವವರಿದ್ದಾರಷ್ಟೇ ಅವರು ಸಮಾಜದಲ್ಲಿರುವ ದೊಡ್ಡ ಮನುಷ್ಯರು. ಕೆಲವರಿಗೆ ಬೇಕಾದಷ್ಟು ಅಧಿಕಾರದ ಬಲವಿರುತ್ತದೆ. ಮತ್ತೆ ಕೆಲವರಿಗೆ ಅತ್ಯಧಿಕವಾದ ಧನವಿರುತ್ತದೆ. ಬುದ್ಧಿ ಬಲವು ಕೂಡಾ ಹೆಚ್ಚೇ. ಒಮ್ಮೆ ಸೋತರೆ ಮತ್ತಿಷ್ಟು ಹಗೆ ತೊಟ್ಟು, ಗಟ್ಟಿಯಾದ ಗುಟ್ಟಿನಲ್ಲಿ ಒಳಗೊಳಗೇ ತಂತ್ರ ಮಾಡುವವರು. ಇಂಥವರಿಂದ ಆಗುವ ಅಪಾಯವು ಬಹಳ ದೊಡ್ಡದಪ್ಪಾ" ಎಂದನು ಸದಾನಂದ ಮುನಿ ಬಿಸಿಬಿಸೀ ನಿಟ್ಟುಸಿರುಬಿಡುತ್ತಾ.

"ಅವರೀಗ ಏನು ಮಾಡಬೇಕೆಂದಿದ್ದಾರೆ?" ಎಂದು ಅಪೂರ್ವನು ಆತುರದಿಂದ ಕೇಳಿದನು.

"ಅದನ್ನೆಲ್ಲಾ ನೀನೇ ಕಂಡು ಹಿಡಿಯಬೇಕು. ನಾನೊಂದುಸಾರಿ ಮಾನವ ಜಾತಿಯ ಭವಿಷ್ಯತ್ತನ್ನು ಕುರಿತು ಆಲೋಚಿಸುತ್ತಾ, ಹಾಗೆಯೇ ಧ್ಯಾನಾವಸ್ಥೆಗೆ ಹೋಗಿಬಿಟ್ಟೆ. ಆಗ ನನ್ನ ದಿವ್ಯ ದೃಷ್ಟಿಗೆ ಒಂದು ದೃಶ್ಯ ಗೋಚರಿಸಿತು. ಇಬ್ಬರು ದೊಡ್ಡ ಮನುಷ್ಯರು ಏನೋ ಅಪವಿತ್ರವಾದ ಕಾರ್ಯವನ್ನು ಕುರಿತು ರಹಸ್ಯವಾಗಿ ಆಲೋಚಿಸುತ್ತಿರುವುದು ಗೊತ್ತಾಯಿತು. ಆ ಇಬ್ಬರಲ್ಲಿ ಒಬ್ಬರನ್ನು ಮಾತ್ರ ನಾನು ಬಲ್ಲೆನು.



ಅವನು ರುದ್ರಪುರಿಯ ಪ್ರಧಾನ ಮಂತ್ರಿ. ಅವರಿಬ್ಬರೂ ನಾಳೆ ರಾತ್ರಿ ಮತ್ತೆ ಸೇರಿಕೊಂಡು ರಹಸ್ಯವಾಗಿ ಮಾತಾಡಲಿದ್ದಾರೆಂದು ನನಗೆ ಗೊತ್ತಾಗಿದೆ. ಆದರೆ ಅವರ ಉದ್ದೇಶವೇನು? ಯಾವ ಬಗೆಯ ಪಥಕ ಎಂಬುದು ಗೊತ್ತಾಗಲಿಲ್ಲ. ನೀನು ಪ್ರಧಾನ ಮಂತ್ರಿಯ ಮನೆಗೆ ಹೋಗಿ, ಅಲ್ಲಿಯ ಪರಿಸ್ಥಿತಿಗಳನ್ನು ಪರೀಕ್ಷಿಸಿ ಅವರ ದುಷ್ಟ ಕಾರ್ಯಗಳು ಎಂತಹುದೆಂದು ತಿಳಿದುಕೊಳ್ಳಬೇಕು" ಎಂದು ಸದಾನಂದ ಮುನಿ ಅಪೂರ್ವನಿಗೆ ಮನಸ್ಸಿನ ಒಳಪದರನ್ನು ತಿಳಿಯುವ ಶಕ್ತಿಯನ್ನು ವಿಶೇಷ ಮಂತ್ರಕ್ರಿಯೆ ನಡೆಸಿ, ಆ ಯಾಗಸಂಭವನಿಗೆ ಕೊಟ್ಟು ಆಶೀರ್ವಾದ ಮಾಡಿದನು.

* * *

ರಾಜನ ಬಹು ದೊಡ್ಡ ಅರಮನೆಯ ಮುಂದೆ ಕೆಲವರು ಆನಂದದಿಂದ, ಉತ್ಸಾಹದಿಂದ ಏನೇನೋ ಹೇಳಿಕೊಂಡು ಅತ್ತಲೂ ಇತ್ತಲೂ ಅವಸರವಸರ



ವಾಗಿ ನಡೆದಾಡುತ್ತಿದ್ದರು. ಆ ಕಡೆಗೆ ಬಂದ ಒಬ್ಬನು ತನಗೆ ಇದಿರಾದ ರಾಜೋದ್ಯೋಗಿಯೊಂದಿಗೆ, "ಏನು ವಿಶೇಷ ಇಲ್ಲಿ? ಎಲ್ಲೆಲ್ಲಿಯೂ ಸಂಭ್ರಮವಾಗಿದೆಯಲ್ಲಾ?" ಎಂದು ಕೇಳಿದನು.

"ನಮ್ಮ ಯುವರಾಣಿ ಕೃಷ್ಣಕುಮಾರಿಯವರು ಲಾವಣ್ಯಪುರದಿಂದ ಹಿಂದಿರುಗಿ ಬರುತ್ತಿದ್ದಾರೆ. ಅವರು ತಮ್ಮ ಸೋದರಮಾವನಾದ ಜಯವರ್ಮನ ಹತ್ತಿರ ಹೋಗಿ ಆರು ತಿಂಗಳಾಗಿದೆ. ಈಗ ಹಿಂದಿರುಗಿ ಬರುತ್ತಿದ್ದಾರೆ. ಅದಕ್ಕೇ ಈ ಕೋಲಾಹಲ" ಎಂದನು ಆ ಉದ್ಯೋಗಸ್ಥ.

ಮತ್ತೆ ಸ್ವಲ್ಪ ಹೊತ್ತಿಗೆ ಭವ್ಯವಾಗಿ ಅಲಂಕರಿಸಲ್ಪಟ್ಟ ಆನೆಯ ಅಂಬಾರೀ ಮೇಲೆ ಬಂಗಾರದ ಕೊಡೆಯ ನೆರಳಿನಲ್ಲಿ ರಾಜಕುಮಾರಿ ಕೃಷ್ಣಾ ಯುವರಾಣಿ ಅರಮನೆಯನ್ನು ಸಮೀಪಿಸಿದಳು. ಅವಳು ಹತ್ತಿರುವ ಆನೆಯ ಹಿಂದೆಯೂ ಮುಂದೆಯೂ ಆನೆಯ ಮೇಲೆ ಯುವರಾಣಿಯ ಸಹಚರಿಯರು ಕುಳಿತಿದ್ದರು. ಎರಡು ಬದಿಗಳಲ್ಲಿಯೂ ಕುದುರೆಗಳ ಮೇಲೆ ರಕ್ಷಕಭಟರು ಅನುಸರಿಸಿ ಬರುತ್ತಿದ್ದರು.

ಆನೆಯ ಮೇಲಿನಿಂದ ಮೊದಲು ಯುವರಾಣಿಯ ಸಹಚರಿಯರು ಕೆಳಗಿಳಿದು ಯುವರಾಣಿಯ ಆನೆಯ ಹತ್ತಿರ ಹೋದರು. ಮಾವಟಿಗನ ಸೂಚನೆಯ ಪ್ರಕಾರ ಯುವರಾಣಿ ಆನೆಯ ಮೇಲಿನಿಂದ ಮೆಲ್ಲಗೆ ಬಾಗಿದಳು. ಭಟರು ಉನ್ನತವಾದೊಂದು ಮೆತ್ತಗಿನ ಆಸನವನ್ನು ತಂದು ಆನೆಯ ಬದಿಯಲ್ಲಿ ಇಟ್ಟರು. ಅದರ ಮೇಲೆ ಯುವರಾಣಿ ಕಾಲಿಟ್ಟು, ಆಮೇಲೆ ನೆಲಕ್ಕೆ ಇಳಿದಳು. ಅವಳು ಇಳಿದ ಜಾಗ ಕೂಡಾ ತುಂಬ ಮೆತ್ತಗಿನ ಜಮುಖಾನೆಯ ನೆಲ.

ಅಷ್ಟು ಹೊತ್ತಿಗೆ ಅಲ್ಲಿಗೆ ಬಂದು ಮುಟ್ಟಿದ ವಿಶ್ವವರ್ಮ ರಾಜನು ಕುಮಾರಿಯನ್ನು ನೋಡಿ ಮಂದಹಾಸ ಬೀರಿದನು. ತಂದೆಯನ್ನು ನೋಡಿದ ಕೂಡಲೇ ಕುಮಾರಿ ಅನುರಾಗದಿಂದ ತಂದೆಯ ಕಡೆಗೆ ಕೈ ಚಾಚಿದಳು.

"ಬಾ ಅಮ್ಮಾ, ಬಾ!" ಎಂದು ರಾಜನು ಅವಳ ಕೈಗಳನ್ನು ಹಿಡಿದು ಆಪ್ಯಾಯತೆಯಿಂದ ಬೆನ್ನು ತಟ್ಟಿದನು.

ರುದ್ರಪುರಿ ರಾಜ ವಿಶ್ವವರ್ಮನ ಏಕೈಕ ಸಂತಾನವಾಗಿದ್ದಳು ಕೃಷ್ಣಕುಮಾರಿ. ಅವಳು ಚಿಕ್ಕ ಮಗುವಾಗಿದ್ದಾಗಲೇ ತಾಯಿ ತೀರಿ ಹೋಗಿದ್ದಳು. ವಿಶ್ವವರ್ಮನು ಆಮೇಲೆ ವಿವಾಹ ಮಾಡಿಕೊಳ್ಳಲು ಅಂಗೀಕರಿಸಲಿಲ್ಲ. ರುದ್ರಪುರಿಯ ನೆರೆಯ ರಾಜ್ಯವಾದ ಲಾವಣ್ಯಪುರಿಯ ರಾಜನು ಜಯವರ್ಮ. ಅವನು ಯುವರಾಣಿ ಕೃಷ್ಣಕುಮಾರಿಗೆ ಸೋದರ ಮಾವನಾಗಬೇಕು. ಅವನಿಗೆ ಮಕ್ಕಳೇ ಇರಲಿಲ್ಲ. ಆದುದರಿಂದ ಅವನು ತನ್ನ ಸೋದರಿಯ ಮಗಳು ಕೃಷ್ಣಕುಮಾರಿಯನ್ನು ತನ್ನ ಕುಮಾರಿ ಎಂದು ಭಾವಿಸಿಕೊಂಡಿದ್ದನು. ಸೋದರಿ ಸತ್ತುಹೋದುದರಿಂದ ಅಭಿಮಾನವೂ ಪ್ರೀತಿಯೂ ಎರಡು ಪಾಲು ಹೆಚ್ಚಾಗಿ

ಪ್ರಸ್ತುತದಲ್ಲಿ ಯುವರಾಣಿ ಕೃಷ್ಣಕುಮಾರಿ ನೆರೆ ಹೊರೆಯ ಎರಡು ರಾಜ್ಯಗಳಾದ ರುದ್ರಪುರಿಗೂ, ಲಾವಣ್ಯಪುರಿಗೂ ಏಕೈಕ ವಾರಸಳಾಗಿದ್ದಳು. ಸೋದರಮಾವ ಜಯವರ್ಮನು ತಂದೆಯಂತೆಯೂ, ಲಾವಣ್ಯಪುರಿಯನ್ನು ತನ್ನ ಸ್ವಂತ ರಾಜ್ಯದಂತೆಯೂ ಅವಳು ಭಾವಿಸಿಕೊಂಡಿದ್ದಳು. ಆದುದರಿಂದಲೇ ಅಲ್ಲಿ ಆರು ತಿಂಗಳಿದ್ದು ಹಿಂದಿರುಗಿ ಬಂದಿರುವಳು. ಮತ್ತೆ ಆರು ತಿಂಗಳಲ್ಲಿ ಅಲ್ಲಿಗೆ ಹೋಗುವಳು. ಆದುದ ರಿಂದ ಪ್ರತಿ ಆರು ತಿಂಗಳಿಗೊಮ್ಮೆ ಅವಳಿಗೆ ಎರಡು ರಾಜ್ಯಗಳಿಗೂ ಸ್ವಂತದವಳಂತೆ ಸ್ವಾಗತ ಸಂಭ್ರಮ ನಡೆಯುತ್ತಿತ್ತು.

ಯುವರಾಣಿಯ ಕೊರಳಿನಲ್ಲಿ ಮುತ್ತಿನ ಹಾರಗಳ ನಡುವೆ ಮಿರಿಮಿರಿ ಹೊಳೆಯುತ್ತಿರುವ ಅದ್ಭುತ ವಾದ ಮಣಿಯನ್ನು ನೋಡಿ, ವಿಶ್ವವರ್ಮ ರಾಜನು ಆಶ್ಚರ್ಯಪಟ್ಟು, "ಏನಿದು ?" ಎಂದು ಕೇಳಿದನು.

"ಅಪ್ಪಾ, ನಾನು ಲಾವಣ್ಯಪುರಿಯಿಂದ ಇನ್ನಿಷ್ಟು ಸಂಪನ್ನತೆ ಪಡೆದು ಬಂದಿದ್ದೇನೆ. ಬಹಳ ಅಪರೂಪ ವಾದದ್ದು ಇದು !" ಎಂದಳು ಯುವರಾಣಿ.

ರಾಜನು ಆ ಕಂಠಹಾರದ ಮಣಿಯನ್ನು ಕೈಯಿಂದ ಮುಟ್ಟಿ ತಡವಿ, ಪರಿಶೀಲಿಸಿ ನೋಡುತ್ತ, "ಹಿಂದೆ ಯಾರೋ ಮಹಾತ್ಮರು ಕೊಟ್ಟ ಇದು ಅಪಾರಶಕ್ತಿ ಇರುವ ಚಂದ್ರಕಾಂತ ಮಣಿಯಲ್ಲವಷ್ಟೆ?" ಎಂದನು.

"ಅದೇ ಇದು ಅಪ್ಪಾ! ಚಂದ್ರಕಾಂತ ಮಣಿಯೇ. ಇದನ್ನು ಎಷ್ಟು ಕಾಲದಿಂದ ಧರಿಸಿಕೊಳ್ಳದೆ ಖಜಾನೆ ಯಲ್ಲಿ ಭದ್ರಪಡಿಸುವುದೆಂದುಕೊಂಡು, ಈಗ ಎರಡು ರಾಜ್ಯಗಳಲ್ಲಿಯೂ ಶಾಂತಿ ಭದ್ರತೆಗಳಿಗೆ ಯಾವ ಕೊರತೆಯೂ ಇಲ್ಲದ್ದರಿಂದ, ಇದೇ ಶುಭ ಕಾಲ ವೆಂದು ಭಾವಿಸಿ, ಮಾವಯ್ಯನವರು ಇದಕ್ಕಾಗಿ ಒಂದು ಹಾರವನ್ನು ಮಾಡಿಸಿ ಇದನ್ನು ಹೊದುಗಿಸಿ ನನ್ನ ಕೊರಳಿಗೆ ಹಾಕಿದ್ದಾರೆ. ಹೇಗಿದೆ ಅಪ್ಪಾ ?" ಎಂದು ಕೇಳಿದಳು.



"ನಿನ್ನ ಮಾವಯ್ಯ ಬಹಳ ದೊಡ್ಡವರು ತಾಯಿ !" ಎಂದು ವಿಶ್ವವರ್ಮ ರಾಜನು ಮಗಳು ಕೃಷ್ಣಕುಮಾರಿಯನ್ನು ಅಪ್ಯಾಯತೆಯಿಂದ ಹತ್ತಿರ ಎಳೆದುಕೊಂಡನು.

* * *

"ಇಷ್ಟು ಕಾಲ ನಿನ್ನ ಕಣ್ಣಿಗೆ ಬೀಳದೆ ದೂರ ದೂರ ಹೋಗುತ್ತಿದ್ದ ಅದೃಷ್ಟ ಈಗ ನಿನ್ನ ಸಮೀಪಕ್ಕೆ ಬಂದಿದೆ. ಕೈಚಾಚಿ ತೆಗೆದುಕೊಳ್ಳುವುದೇ ಬಾಕಿ !" ಎಂದನು ಮಾಂತ್ರಿಕನು ಪರಮಾನಂದ ದಿಂದ ಇದಿರಿನಲ್ಲಿದ್ದ ಮುಖ್ಯಮಂತ್ರಿಯನ್ನು ನೋಡಿ.

ಮುಖ್ಯ ಪ್ರಧಾನಿ ಮೌನವಾಗಿ ಅವನು ಹೇಳುವು ದನ್ನು ಕೇಳುತ್ತಿದ್ದನು.

"ಆದರೆ ಈ ಅದೃಷ್ಟವು ಅದರಷ್ಟಕದೇ ಬಂದಿ ತೆಂದು ಅಂದುಕೊಳ್ಳುವಿಯೇನೋ? ಅದು ನಿಜವಲ್ಲ. ನಾನು ನನ್ನ ಮಂತ್ರಶಕ್ತಿಯನ್ನು ಪ್ರಯೋಗಿಸಿದ್ದೇನೆ ಗೊತ್ತಾ ? ಲಾವಣ್ಯಪುರಿಯ ರಾಜ ಜಯವರ್ಮನ



ಮನಸ್ಸು ಬದಲಾಗಲಿಕ್ಕೆ ಅದೇ ಕಾರಣ. ಅವನಿಗೆ ತಿಳಿಯದ ಹಾಗೆಯೇ ಅವನ ಮನಸ್ಸಿನಲ್ಲಿ ಚಂದ್ರಕಾಂತಮಣಿಯನ್ನು ಯುವರಾಣಿ ಕೃಷ್ಣಕುಮಾರಿಯ ಕೊರಳಿಗೆ ಹಾಕಬೇಕೆಂಬ ಆಶೆ ಬರುವಂತೆ ಮಾಡಿದೆನು" ಎಂದು ಮಾಂತ್ರಿಕನು ತುದಿ ಬೆರಳುಗಳಿಂದ ಗಡ್ಡವನ್ನು ನೀವಿಕೊಳ್ಳುತ್ತಾ ಹೇಳಿದನು ಗರ್ವದಿಂದ.

"ಹಾಗೇನು? ನಿಮ್ಮ ಶಕ್ತಿ ಅಸಾಮಾನ್ಯವೆಂದು ನನಗೆ ಗೊತ್ತಿದೆ ಮಿತ್ರ ಮಹಾತ್ಮಾ" ಎಂದನು ಪ್ರಧಾನ ಮಂತ್ರಿ.

"ಮಾಂತ್ರಿಕನು ಮಹಾತ್ಮನೇ? ಪರಮ ದುರ್ಮಾರ್ಗಿ!" ಎಂದು ಮರೆಯಲ್ಲಿದ್ದು ಅವರ ಸಂಭಾಷಣೆ ಕೇಳಿದ ಅಪೂರ್ವನು ಅಂದುಕೊಂಡನು.

"ಜಯವರ್ಮನಿಗಾಗಲಿ, ವಿಶ್ವವರ್ಮನಿಗಾಗಲಿ ಚಂದ್ರಕಾಂತಮಣಿಯ ಮಹತ್ವವು ತಿಳಿಯದೆ ಹೋದದ್ದು ನಮ್ಮ ಅದೃಷ್ಟವೇ. ಪ್ರಪಂಚದೊಳಗಿನ ಬೆಲೆಬಾಳುವ ಮಣಿಗಳಲ್ಲಿ ಅದೊಂದೆಂಬ ಗುಟ್ಟು ಮಾತ್ರವೇ ಅವರಿಗೆ ಗೊತ್ತು. ಆ ಮಣಿಯ ಅಪೂರ್ವವೂ ಅಪಾರವೂ ಆದ ಮಹತ್ವ ಅವರಿಗೆ ಸ್ವಲ್ಪವೂ ಗೊತ್ತಿಲ್ಲ" ಎಂದು ಗಟ್ಟಿಯಾಗಿ ನಗಲು ಬಾಯಿ ತೆರೆದು, ಫಕ್ಕನೆ ಬಾಯಿ ಮುಚ್ಚಿಕೊಂಡನು ಮಾಂತ್ರಿಕ. "ಯಾಕೆ ಸ್ವಾಮಿ! ಏನಾಯಿತು?" ಪ್ರಧಾನ ಮಂತ್ರಿ ಅತ್ತಿತ್ತ ನೋಡಿದನು.

"ಅದೇನಿಲ್ಲ! ಗೋಡೆಗೂ ಕಿವಿಗಳಿವೆ ಅನ್ನುತ್ತಾರಷ್ಟೆ? ಅದಕ್ಕಿಂತ ಸೂಕ್ಷ್ಮದ ಕಿವಿ ಗಾಳಿಯದು" ಎಂದನು ಮೆಲ್ಲನಿಯಿಂದ ಮಾಂತ್ರಿಕ.

"ಅವೆರಡನ್ನೂ ಮೀರಿಸುವ ಕಿವಿಗಳು ನನ್ನ ಜನ್ಮದಾತರೂ ಗುರುಸ್ವರೂಪರೂ ಆದವರದೆಂದು ಇವರಿಗೆ ತಿಳಿಯದು! ಇವರ ಮಸಲತ್ತು ಅರಿತು, ಹೆಚ್ಚಿನದನ್ನು ಅರಿಯುವ ಶಕ್ತಿ ನನಗೆ ಪ್ರಸಾದಿಸಿದ್ದಾರೆ! ಅವರು ಹೇಳಿದ್ದು ನಿಜವೇ. ಮನಸ್ಸಿನ ಪೊರೆಯೊಳಗೆ ಎಂತೆಂತಹ ಪದರುಗಳಿವೆಯೋ!" ಎಂದು ತನ್ನೊಳಗೇ ಅಂದುಕೊಂಡನು ಅಪೂರ್ವ.

ಮಾಂತ್ರಿಕನೂ ಪ್ರಧಾನ ಮಂತ್ರಿಯೂ ಸುಮಾರು ಒಂದು ಗಂಟೆ ಹೊತ್ತು ರಹಸ್ಯ ಆಲೋಚನೆ ನಡೆಸಿದರು. ಅವರ ಸಂಭಾಷಣೆಗಳನ್ನು ಕೇಳಿದ ಅಪೂರ್ವನಿಗೆ ಅಲ್ಲಿಯ ವಿಷಯಗಳೆಲ್ಲಾ ಅರ್ಥವಾಯಿತು. ಪ್ರಧಾನ ಮಂತ್ರಿಯೂ ಮಾಂತ್ರಿಕನೂ ಒಂದು ಗುರುಕುಲದಲ್ಲಿ ಒಬ್ಬನೇ ಗುರುವಿನ ಹತ್ತಿರ ಕಲಿತು ಬೆಳೆದ ಬಾಲ್ಯಕಾಲದ ಸ್ನೇಹಿತರಾಗಿದ್ದರು. ಅವರ ಗುರುವಿನ ಗುರು ಅದ್ಭುತ ಶಕ್ತಿಯ ಚಂದ್ರಕಾಂತ ಮಣಿಯನ್ನು ಜಯವರ್ಮನ ತಾತನಿಗೆ ಬಹುಮಾನ ಕೊಟ್ಟಿದ್ದನು. ಆಗಿನಿಂದ ಮೂರು ತಲೆಮಾರಿನವರೆಗೆ, ಲಾವಣ್ಯಪುರಿಯ ರಾಜ ಕುಟುಂಬಕ್ಕೆ ಸೇರಿದ ಖಜಾನೆಯಲ್ಲಿಯೇ ಆ ಚಂದ್ರಕಾಂತ ಮಣಿ ನಿದ್ರಿಸಿಕೊಂಡಿದ್ದಿತು.

ಈ ಮಾಂತ್ರಿಕನು ಒಂದು ದಿನ ಪ್ರಾಚೀನ ತಾಳಪತ್ರ ಗ್ರಂಥಗಳನ್ನು ಪರಿಶೀಲಿಸಿಕೊಂಡಿರುವಾಗ,

ಒಂದು ರಹಸ್ಯವು ತಿಳಿದು ಬಂತು. ಚಂದ್ರಕಾಂತ ಮಣಿಯು ಅದ್ಭುತ ಶಕ್ತಿಗಳು ತುಂಬಿದಂಥವೆಂದು, ಅದನ್ನು ಧರಿಸಿಕೊಂಡು ಕೆಲವು ಪ್ರತ್ಯೇಕ ಪೂಜೆಗಳನ್ನು ಮಾಡಿದ್ದಾದರೆ ಎಲ್ಲಾ ರಾಜರಿಗೂ ಚಕ್ರವರ್ತಿಯಾಗಬಹುದು. ಇದು ತಿಳಿದಕೂಡಲೇ ಹೇಗಾದರೂ ಆ ಮಣಿಯನ್ನು ಕೈವಶ ಮಾಡಿಕೊಳ್ಳಬೇಕೆಂದು ಮಾಂತ್ರಿಕನು ಒಂದೇಸಮನೆ ಆಲೋಚಿಸಿಕೊಂಡಿದ್ದನು. ಜಯವರ್ಮನ ದರ್ಶನ ಮಾಡಿ ಧ್ಯಾನವನ್ನು ನಟಿಸಿ, ಖಜಾನೆಯಲ್ಲಿರುವ ವಿಶೇಷ ಮಣಿಯನ್ನೇ ಕಂಡು ಹಿಡಿವಂತೆ ಹೇಳಿ, ಯುವರಾಣಿ ಕೃಷ್ಣಕುಮಾರಿ ದುಷ್ಟ ಶಕ್ತಿಯ ಪ್ರಭಾವಕ್ಕೆ ಒಳಗಾಗಿರುವಳೆಂದೂ, ಅವಳನ್ನು ಕಾಪಾಡಿಕೊಳ್ಳಲು ಬೆಲೆಬಾಳುವ ಮಣಿಯ ಹಾರ ಮಾಡಿ ಹಾಕಿಸಬೇಕೆಂದೂ ಹೇಳಿದನು. ಸೋದರ ಸೊಸೆಯ ಮೇಲಿನ ಅಭಿಮಾನದ ಕಾರಣದಿಂದ ಜಯವರ್ಮನು ಕೂಡಲೇ ಖಜಾನೆಯಲ್ಲಿದ್ದ ಮಣಿಯನ್ನು ಹೊದುಗಿಸಿದ ಚಂದ್ರಹಾರವನ್ನು ಅವಳ ಕೊರಳಿಗೆ ಅಲಂಕರಿಸಿದನು. ಆದರೆ ಅವಳ ಮೇಲೆ ದುಷ್ಟಶಕ್ತಿ ಪ್ರಭಾವವಿದೆ ಎಂಬ ಸಂಗತಿಯನ್ನು ಅವಳಿಗೆ ಹೇಳಲಿಲ್ಲ.

ತಾನು ಮಂತ್ರಶಕ್ತಿಯನ್ನು ಪ್ರಯೋಗಿಸಿ ಜಯವರ್ಮನ ಮನಸ್ಸಿನಲ್ಲಿ ಬದಲಾವಣೆ ತಂದೆನೆಂದು, ಆದ್ದರಿಂದಲೇ ಅವನು ಬೆಲೆಬಾಳುವ ಮಣಿಯನ್ನು ಬಿಟ್ಟುಕೊಡಲು ಸಿದ್ಧನಾದನೆಂದು ಆ ಧೂರ್ತ ಮಾಂತ್ರಿಕನು ಪ್ರಧಾನ ಮಂತ್ರಿಗೆ ಕಲ್ಪಿಸಿ ಹೇಳಿದನು. ಆ ಮಾತನ್ನು ಮಂತ್ರಿ ನಂಬಿದನು. ಮಹಾ ಮಂತ್ರಜ್ಞಾನಿಯಾದ ತನ್ನ ಸ್ನೇಹಿತನ ಸಹಾಯದಿಂದ ತಾನು ದೊಡ್ಡ ಚಕ್ರವರ್ತಿಯಾಗಬೇಕೆಂದು ಪ್ರಧಾನಮಂತ್ರಿ ಕನಸು ಕಾಣಲು ತೊಡಗಿದನು.

ಆದರೆ ಚಂದ್ರಕಾಂತಮಣಿ ಕೈಗೆ ಸಿಕ್ಕಿದ ಕೂಡಲೇ ಪ್ರತ್ಯೇಕ ಪೂಜೆಗಳನ್ನು ಮಾಡಬೇಕೆಂಬ ನೆಪನದಲ್ಲಿ ಅದನ್ನು ಅಪಹರಿಸಬೇಕೆಂದು ಮಾಂತ್ರಿಕನು ಪಥಕ ಹಾಕಿರುವನೆಂಬುದನ್ನು ಪ್ರಧಾನಮಂತ್ರಿ ತಿಳಿದುಕೊಳ್ಳಲಾಗದೆ ಹೋಗಿದ್ದನು! ಮಾಂತ್ರಿಕನು ನಿಜ ವಿರಕ್ತನೆಂದೇ ಅವನ ನಂಬುಗೆ.

ಮಾನವರ ಕಣ್ಣುಗಳನ್ನು ನೋಡಿ ಅವರ ಸ್ವಭಾವವನ್ನು ತಿಳಿದುಕೊಳ್ಳಬಲ್ಲ ಶಕ್ತಿ ಅಪೂರ್ವನಿಗೆ ಬಂದಿತ್ತು. ಪ್ರಧಾನಮಂತ್ರಿ ಮೂರ್ಖನಾಗಿದ್ದನೇ ಹೊರತು ಮಾಂತ್ರಿಕನಂಥ, ಗಡ್ಡಕಟ್ಟಿದ ದುಷ್ಟನಲ್ಲ, ಅವನ ದುಷ್ಟತ್ವ ಸಹಕರಿಸಿದವರನ್ನು ಆದರಿಸುವಂತಹುದು. ಮಾಂತ್ರಿಕನೋ! ಕೇಳುವುದೇನಿದೆ? ಅಂಥವನು ಚಕ್ರವರ್ತಿಯಾದರೆ ಭವಿಷ್ಯತ್ತು ಏನಾದೀತು? ಅದಕ್ಕೇ ಗುರುವರೇಣ್ಯರು ತನ್ನನ್ನು ನಿಯಮಿಸಿದ್ದು ಎಂದುಕೊಂಡು ಗುರುಸ್ಮರಣೆಯಿಂದ ಅಪೂರ್ವನು ಆಲೋಚಿಸತೊಡಗಿದನು. (ಇನ್ನೂ ಇದೆ)






## ೧೧

[ಸದಾನಂದ ಮುನಿಯ ಆದೇಶದಂತೆ ದುಷ್ಟರನ್ನು ಇದಿರಿಸಲಿಕ್ಕಾಗಿ ಅಪೂರ್ವನು ಹಿಮಾಲಯದಿಂದ ರುದ್ರಪುರಕ್ಕೆ ಬಂದನು. ಅಲ್ಲಿಯ ಯುವರಾಣಿ ಕೃಷ್ಣಕುಮಾರಿಯ ಕಂಠಹಾರದ ಮಹಿಮೆಯ ಚಂದ್ರಕಾಂತ ಮಣಿಯನ್ನು ಅಪಹರಿಸಲು ದುಷ್ಟ ಮಾಂತ್ರಿಕನು ಮುಖ್ಯಮಂತ್ರಿಯೊಂದಿಗೆ ರಹಸ್ಯಾಲೋಚನೆ ನಡೆಸುವುದನ್ನೆಲ್ಲಾ ಅಪೂರ್ವನು ಅಡಗಿ ಕೇಳಿಕೊಂಡನು. ಮಾಂತ್ರಿಕನ ದುರ್ಬುದ್ಧಿ ಅಪೂರ್ವನಿಗೆ ತಿಳಿಯಿತು. —ಅನಂತರ]

ದುಷ್ಟರೊಳಗಿನ ದುಷ್ಟನಾದ ಆ ಮಾಂತ್ರಿಕನು ತನ್ನನ್ನು ನಂಬಿರುವ ದುಷ್ಟ ಮಂತ್ರಿಯ ರಹಸ್ಯ ಕೋಣೆಯಿಂದ ಹೊರಗೆ ಬಂದಾಗ ಅರ್ಧರಾತ್ರಿ ಮೀರಿ ಹೋಗಿತ್ತು. ಮಾಂತ್ರಿಕನು ಕಪ್ಪಿನ ಅಂಗಿ ಬಟ್ಟೆಗಳಿಂದ, ಕರಿಯ ತಲೆಕೂದಲು ಉದ್ದವಾದ ಗಡ್ಡ ಮೀಸೆಗಳಿಂದ ಕಪ್ಪು ಕತ್ತಲೆಯೇ ರೂಪುಗೊಂಡಂತೆ ನಡೆಯುತ್ತಿದ್ದನು. ಬೊಂಬೆ ಮಾನವನಂತಿದ್ದ ಅಪೂರ್ವನು ಅವನ ಬೆಂಗಡೆಯಲ್ಲೇ ಇರುವುದನ್ನು ಅವನು ಅರಿಯನು. ಹಾಗೊಬ್ಬನಿರುವನೆಂಬ ಊಹನೆಯೇ ಇರಲಿಲ್ಲ ಅವನಿಗೆ.

ಚಂದ್ರಕಾಂತ ಮಣಿಯೊಂದಿಗೆ ಮಾಂತ್ರಿಕನು ಯಾವ ರೀತಿಯ ಪೂಜೆ ಮಾಡುವನೋ ? ಅಂತಹ ಪೂಜಾ ವಿಧಾನಗಳನ್ನು ಅವನು ಯಾರಿಂದ ಕಲಿತುಕೊಂಡನೋ ? ಪೂಜಾ ಕ್ರಿಯೆ ಮಾಡುವವರು ಯಾರೋ ? ಎಂಥವರೋ ? ಮುಂತಾದುವನ್ನೆಲ್ಲಾ ತಿಳಿದುಕೊಳ್ಳಬೇಕೆಂಬ ಉತ್ಸಾಹದಲ್ಲಿ ಅಪೂರ್ವನು ಮಾಂತ್ರಿಕನ ಮೇಲೆಯೇ ಕಿವಿಯನ್ನೂ ದೃಷ್ಟಿಯನ್ನೂ ಇಟ್ಟು, ದೂರದಿಂದಲೇ ತನ್ನ ಕಾಲಿನ ಸದ್ದು ಕೇಳದಂತೆ ಎಚ್ಚರಿಕೆಯಿಂದ ನಡೆಯುತ್ತಿದ್ದನು. ಮಾಂತ್ರಿಕನ ಕಿವಿಗಳು ಎಷ್ಟೇ ಸೂಕ್ಷ್ಮವಾಗಿದ್ದರೂ,



ಅತ್ತಿತ್ತ ನೋಡುವ ಅವನ ಕಣ್ಣುಗಳು ತೀಕ್ಷ್ಣವಾಗಿದ್ದರೂ, ಇನ್ನೊಬ್ಬ ತನ್ನೊಂದಿಗಿರುವನೆಂದು ಅವನಿಗೆ ಸ್ವಲ್ಪವೂ ತಿಳಿಯಲಿಲ್ಲ.

ಹಾಗೆ ಅವರು ನೆಲದಲ್ಲಿ ತಗಲಿದ ವಸ್ತುಗಳನ್ನು ಸದ್ದಾಗದಂತೆ, ಕುಪ್ಪಳಿಸಿ, ಬಳಸಿ, ಹಾರಿ, ಎಗರಿ ದಾಟಿಕೊಂಡು ನಗರದ ಮೇರೆಯಾಚೆಗಿನ ಒಂದು ದಾರಿಯನ್ನು ಹಿಡಿದರು.

ಅದು ಒಬ್ಬರ ಹಿಂದೊಬ್ಬರು ನಡೆಯುವಂತಹ ಇಕ್ಕೆಲಗಳಲ್ಲಿ ಮುಳ್ಳು ಪೊದರುಗಳಿರುವ ದಾರಿ. ಹಾಗೆ ಅವರು ಸ್ವಲ್ಪದೂರ ಹೋಗುವಾಗ ದಾರಿಯ ಪಕ್ಕದಲ್ಲಿದ್ದ ಪೊದರಿನಾಚೆಯಿಂದ ಬಲಿಷ್ಠವಾದೊಂದು ಕರಡಿ ಎದ್ದು ಬಂದು ಮಾಂತ್ರಿಕನ ಮುಂದೆ ಬಾಗಿತು. ಮಾಂತ್ರಿಕನು ಅದರ ಬೆನ್ನಿನ ಮೇಲೆ ಏರಿ ಕುಳಿತು ಅದರ ಕಿವಿಯನ್ನು ತಿರುಚಿದ ಕೂಡಲೇ ಅದು ಒಮ್ಮೆಗೇ ಮಹಾವೇಗ ತಂದುಕೊಂಡು ಸೀದಾ ಅರಣ್ಯದ ಕಡೆಗೆ ಓಡಿತು!

ಅಂಥಾ ದೊಡ್ಡಕರಡಿ ಚಿಕ್ಕನ ದೇಹದಿಂದ ಓಡುತ್ತಿದ್ದ ಅವರಾರಿಗೇನೂ ತಿಳಿಯಲಿಲ್ಲ. ಅವರೂ ಓಡುವ ಆ ಕರಡಿಯ ಹಿಂದೆಯೇ ಇದ್ದರು.

ಸ್ವಲ್ಪ ಹೊತ್ತಿಗೆ ಅವರು ಒಂದು ಚಿಕ್ಕ ನದಿಯ ತೀರವನ್ನು ಮುಟ್ಟಿದರು. ಕರಡಿಯ ಬೆನ್ನಿನ ಮೇಲಿಂದ ಅಲ್ಲಿ ಕೆಳಗಿಳಿದ ಮಾಂತ್ರಿಕನು ಕರಡಿಯ ಕಿವಿಗಳನ್ನು ಹಿಡಿದು ಒತ್ತುವಂತೆ ತಿರುಗಿಸುತ್ತ, "ಮೂರ್ಖ! ಓಡುವುದನ್ನು ಕೂಡಾ ಮರೆತು ಬಿಟ್ಟೆಯಾ? ಛೀ! ಛೀ! ಇಷ್ಟು ನಿಧಾನವೇ ನಿನ್ನ ಓಟ! ಹೋಗು. ಅಲ್ಲಿ ದೇವದಾರು ಮರಪಕ್ಕದ ಹತ್ತಿರ ನಿಲ್ಲು. ನಾನೀಗಲೇ ಬರುತ್ತೇನೆ" ಎಂದನು.

ಕರಡಿ ಆಗಲೆಂಬಂತೆ ಗುರುಗುಟ್ಟಿ, ಅಲ್ಲಿಂದ ಹೊರಟು ಕತ್ತಲೆಯಲ್ಲಿ ಕರಗಿಹೋಯಿತು. ಆ ಮೃಗದ ಪರಿಸ್ಥಿತಿ ನೋಡಿ ಆಶ್ಚರ್ಯವಾಗಿ ಕರುಣೆ ಉಂಟಾಯಿತು. ಅವನೂ ಒಂದೊಂದುಸಾರಿ ಪ್ರಾಣಿಗಳ ಮೇಲೆ ಸವಾರಿ ಮಾಡುವುದುಂಟು. ಆದರೆ ಅವುಗಳನ್ನು ಬೆದರಿಸುವುದಿಲ್ಲ; ಹಿಂಸಿಸುವುದಿಲ್ಲ. ಕೃತಜ್ಞತೆಯಿಂದ, ಪ್ರೇಮದಿಂದ ನೋಡಿಕೊಳ್ಳುತ್ತಾನೆ. ಆದುದರಿಂದ ಪ್ರಾಣಿ ಪಕ್ಷಿಗಳೆಲ್ಲಾ ಅವನನ್ನು ಆಪ್ಯಾಯತೆಯಿಂದ ನೋಡುತ್ತವೆ. ಹೇಳಿದ ಹಾಗೆ ಕೇಳುತ್ತವೆ.

ಆದರೆ ಈ ಮಾಂತ್ರಿಕನು ಕರಡಿಯನ್ನು ಮಂತ್ರ ಪ್ರಭಾವದಿಂದ ಬೆದರಿಸಿ, ವಶಪಡಿಸಿಕೊಂಡಿದ್ದಾನೆಂದು ಅರ್ಥ! ಹಿಂಸೆಯೇ ಅದರಿಂದ ಅಡಿಯಾಳಾಗ ಮಾಡಿಸಿಕೊಳ್ಳುತ್ತಿದ್ದಾನೆಂದಾಯಿತು!

ಇಲ್ಲಿ ಮಾಂತ್ರಿಕನು ನದಿಯನ್ನು ಸಮೀಪಿಸಿ, ಮೂರುಸಾರಿ ಚಪ್ಪಾಳೆ ತಟ್ಟಿದನು. ಕೂಡಲೇ ದೂರದಲ್ಲಿ ನದಿಯ ನೀರು ಮೇಲಕ್ಕೆ ಹಾರತೊಡಗಿ, ದೊಡ್ಡದೊಂದು ಮೊಸಳೆ ಈಜುತ್ತಾ ನದಿಯ ನೀರನ್ನು ಸೀಳಿಕೊಂಡು ಮಾಂತ್ರಿಕನ ಹತ್ತಿರ ಬಂತು. ಅದೂ ಕರಡಿಯಂತೆಯೇ ಮಾಂತ್ರಿಕನ ಹಿಂಸೆಗೆ



ಹೆದರುವಂತಹುದೇ. ಅದು ತೀರಕ್ಕೆ ಬಂದು ಮಾಂತ್ರಿಕನ ಪಾದಗಳಿಗೆ ನಮಸ್ಕರಿಸುವಂತೆ ಮೂರು ಸಾರಿ ಮೂತಿ ಬಡಿಯಿತು.

ಮಾಂತ್ರಿಕನು ಅದರ ಬೆನ್ನಿನ ಮೇಲೆ ಏರಿ ಕುಳಿತನು. "ಬಹು ಬೇಗ ಹೋಗಬೇಕು ! ಹೂಂ" ಎಂದು ಆಜ್ಞೆ ಮಾಡಿದನು ಮಾಂತ್ರಿಕ.

ಆ ಮೊಸಳೆ ನದಿಯಲ್ಲಿ ಬಾಣದ ವೇಗದಲ್ಲಿ ನೀರನ್ನು ಸೀಳುತ್ತಾ ಓಡತೊಡಗಿತು.

ಅದನ್ನನುಸರಿಸಿ ಬೊಂಬೆ ರೂಪದ ಅಪೂರ್ವನೂ ತೀರದ ಮೇಲೆಯೇ ಓಡಲಾರಂಭಿಸಿದನು. ಆಗ ಆಕಾಶದಲ್ಲಿ ಚಂದ್ರನು ರೇಖಾಮಾತ್ರನಾಗಿ ಕಾಣುತ್ತಿದ್ದನು. ಅಲ್ಲಲ್ಲಿ ಅನೇಕ ನಕ್ಷತ್ರಗಳು ಮಿನುಗುತ್ತಿದ್ದುವು.

ನದಿಯ ಆಚೆಯಲ್ಲಿಯೂ ಈಚೆಯಲ್ಲಿಯೂ ಪೊದೆಗಳು ಗುಂಪು ಗುಂಪಾಗಿದ್ದುವು. ಅವುಗಳಾಚೆಯಿಂದಲೋ ಮತ್ತೆಲ್ಲಿಂದಲೋ ನರಿಗಳ ಊಳು ಸದ್ದು ಆಗಾಗ ಹೊರಡುತ್ತಿತ್ತು. ಆಗಾಗ ಮರಗಳ ಕಡೆಗಳಿಂದ ಗೂಗೆಗಳ ಘೂಂಕಾರವೇಳುತ್ತಿದ್ದುವು. ಎಲ್ಲೋ ದೂರದಲ್ಲಿ ಹುಲಿಗಳ ಗಾಂಡ್ರಿಕೆಯ ಶಬ್ದ. ಮಾನವ ಮಾತ್ರರಿಗೆ ಧೈರ್ಯ ಸಾಯುವ ಜಾಗ !

ಆದರೆ ಭಯವೆಂದರೇನೆಂದು ತಿಳಿಯದ ಅಪೂರ್ವನು ಅವುಗಳ ಗೊಡವೆಯೇ ಇಲ್ಲದವನಂತೆ ವಿಕೃತ ಬುದ್ಧಿಯ ವಿಲಕ್ಷಣ ಮಾಂತ್ರಿಕನ ಬೆನ್ನು ಬಿಡದೆ ಓಡುತ್ತಲೇ ಇದ್ದನು.

ಹಾಗೆ ಬಹುದೂರ ಓಡಿದ ಮೇಲೆ ನದಿ ಎರಡು ಕವಲುಗಳಾಗಿ ಶಾಖೆಯೊಡೆದ ಜಾಗ ಬಂತು. ಅವುಗಳಲ್ಲಿ ಒಂದು ಶಾಖಾನದಿ ತುಂಬ ಇಕ್ಕಟ್ಟಿನದು. ಅದು ಸ್ವಲ್ಪ ದೂರ ಹೋಗಿ ಎರಡು ಕಡೆಗಳಲ್ಲಿರುವ ಗುಡ್ಡಗಳೆಡೆಯ ಸುರಂಗದೊಳಗೆ ನುಗ್ಗುತ್ತಿದ್ದಿತು. ಆ ಇಕ್ಕಟ್ಟಿನಲ್ಲಿ ನೀರಿನ ಆಳ ವಿಪರೀತವಿತ್ತು.

ಮಾಂತ್ರಿಕನನ್ನು ಹೊತ್ತುಕೊಂಡ ಮೊಸಳೆ ಆ ಸುರಂಗದೊಳಗೆ ಹೊಕ್ಕಿತು. ಕಗ್ಗತ್ತಲೆಯ ಗೂಡಿನಂತಹ ಬೆಟ್ಟದ ಗುಹೆಯದು.

ಅದುವರೆಗೆ ತೀರದಲ್ಲಿ ಓಡುತ್ತಿದ್ದ ಅಪೂರ್ವನು ನಿರ್ಲಕ್ಷ್ಯವಾಗಿ ಆ ನದೀ ಶಾಖೆಗೆ ಧುಮುಕಿ ಮೊಸಳೆಯ ಹಿಂದೆಯೇ ಈಜುತ್ತಾ ಹೋಗತೊಡಗಿದನು. ಮೊಸಳೆಯ ನೀರ್ಸೀಳುವ ಸದ್ದಿನಲ್ಲಿ ಅಪೂರ್ವನ ಈಜುವ ಸದ್ದು ಅಡಗಿತು.

ಮೊಸಳೆ ಸುರಂಗದ ಮುಖ ದ್ವಾರದಲ್ಲಿ ನಿಂತಿತು. ಮಾಂತ್ರಿಕನು ಒಂದೇ ಹಾರಿಕೆಗೆ ತೀರದಲ್ಲಿದ್ದ ಬಂಡೆಯ ಮೇಲೆ ಹಾರಿ ನಿಂತು ನೋಡಿದನು.

"ಯಾರಲ್ಲಿ ?" ಎಂಬೊಂದು ತೀಕ್ಷ್ಣವಾದ ಸ್ವರವು ಗುಹೆಯೊಳಗಿನಿಂದ ಹೊರಟಿತು.

ಅಂತಹ ವಿಚಿತ್ರ ಕಂಠಸ್ವರವನ್ನು ಅಪೂರ್ವನು ಈವರೆಗೂ ಕೇಳಿರಲಿಲ್ಲ. ಅದೊಂದು ಮುದುಕಿಯ ಒಡಕು ಕಂಚಿನ ಸ್ವರದ ಹಾಗೆ ಕೇಳಿದ್ದರಿಂದ ಅತ್ಯಾಶ್ಚರ್ಯವಾಯಿತು ಅಪೂರ್ವನಿಗೆ.

"ನಿನ್ನ ಭೃತ್ಯನಾದ ವೀರವಿಕಟನಮ್ಮಾ ನಾನು. ಒಳಗೆ ಬರಬಹುದೆ ?" ಎಂದನು ಮಾಂತ್ರಿಕ.

"ನೀನು ಬಂದದ್ದು ಗೊತ್ತಾಯಿತಪ್ಪಾ. ಮತ್ತೆ ನಿನ್ನೊಂದಿಗೆ ಬೆಂಬತ್ತಿ ಬಂದ ಇನ್ನೊಬ್ಬನು ಯಾರು ? ಅವನೇಕೆ ನಿನ್ನೊಂದಿಗೆ ?" ಎಂದು ಗದರಿಸುವಂತೆ ಕೇಳಿತು ಆ ಒಡಕು ಕಂಚುಕಂಠ.

"ನಾನೂ ವಾಹನ ಮೊಸಳೆಯೂ ಹೊರತು ಇನ್ನೊಂದು ಪ್ರಾಣಿ ಬಂದಿಲ್ಲವಲ್ಲವಮ್ಮಾ ?" ಎಂದನು ಮಾಂತ್ರಿಕ.

"ಮೂರ್ಖಾ, ಸುತ್ತುಮುತ್ತಲೂ ಸರಿಯಾಗಿ ನೋಡಿ ಮಾತಾಡು ! ನಿನಗೆ ಗೊತ್ತಿಲ್ಲದಂತೆ ಇನ್ನೊಬ್ಬ ಬಂದಿದ್ದಾನೆಂದಾಯಿತು !" ಎಂದು ಎಚ್ಚರಿಸಿತು ಆ ಕಂಠಸ್ವರ.

ಗುಹೆಯೊಳಗಿನ ಮುದುಕಿ ತಾನು ಬಂದಿರುವ ಸಂಗತಿಯನ್ನು ನೋಡುವಷ್ಟು ಸೂಕ್ಷ್ಮದೃಷ್ಟಿಯುವಳೆಂದು ಅಪೂರ್ವನಿಗೆ ತಿಳಿಯಿತು. ಕೂಡಲೇ ಅವನು ಮೊದಲು ಗುರುವಿನಿಂದ ಉಪದೇಶಿಸಲ್ಪಟ್ಟ ಅದೃಶ್ಯ ಕರಣಿ ಮಂತ್ರ ಜಪಿಸಿ ಯಾರಿಗೂ ಕಾಣದಂತೆ ಮಾಯವಾಗಿ ಬಿಟ್ಟನು.

ಮಾಂತ್ರಿಕನು ಸುರಂಗದೊಳಗೆಲ್ಲಾ ಕಣ್ ಕುತ್ತಿ ಪರೀಕ್ಷಿಸಿ ನೋಡಿದನು. ಯಾರೂ ಕಾಣಲಿಲ್ಲ.

"ಇಲ್ಲವಮ್ಮಾ ಇಲ್ಲ ! ಈ ಪರಿಸರದಲ್ಲೆಲ್ಲಿಯೂ ನಾನೂ ಮೊಸಳೆಯೂ ಅಲ್ಲದೆ ಬೇರೆ ಜೀವವಾವುದೂ ಇಲ್ಲ" ಎಂದನು ಮಾಂತ್ರಿಕ.

"ಮೊಸಳೆ ತಂದುಕೊಂಡ ಮೀನಾಗಿದ್ದೀತು. ಊಂ, ಬಾ" ಎಂದು ಕೀರಲು ಕಂಠಸ್ವರದ ಆಜ್ಞೆಯಾಯಿತು.

ವೀರವಿಕಟನು ಗುಹೆಯೊಳಗೆ ಕಾಲಿಟ್ಟನು.

ಅಪೂರ್ವನು ಮೆಲ್ಲನೆ ಮತ್ತೊಂದು ಬಂಡೆಯ ಮೇಲೇರಿ, ಅಲ್ಲಿರುವ ಇಳಿಜಾರಾದ ಪಾಚಿ ಹಿಡಿದು ಜಾರುವ ಬಂಡೆಯಲ್ಲಿ ಜಾರುತ್ತಾ ಕೆಳಗೆ ಇಳಿದನು.



ಮುದುಕಿ ಮಾನವ ಕಪಾಲದಲ್ಲಿ ಉರಿಯುವ ಬೆಂಕಿಗೆ ಒಂದು ಬಗೆಯ ಯಾವುದೋ ಪುಡಿಯನ್ನು ಹಾಕುತ್ತ, ಗುಹೆಯೊಳಗೆ ಹಳದಿ ಬಣ್ಣದ ಕಾಂತಿಯನ್ನು ಹುಟ್ಟಿಸಿಕೊಂಡು ಕಾಲುಗಳನ್ನು ಉದ್ದಕ್ಕೆ ಚಾಚಿ ಗೋಡೆಗೆ ಒರಗಿ ಕುಳಿತಿದ್ದಳು.

ಅವಳ ವಯಸ್ಸು ಇಂತಿಷ್ಟೆಂದು ಖಂಡಿತ ಹೇಳಲಾಗದಿದ್ದರೂ ಮುನ್ನೂರು ವರ್ಷದವಳಾಗಿದ್ದಾಳು ! ಅವಳ ಶರೀರವು ಕೇವಲ ಚರ್ಮವಂಟಿಕೊಂಡ ಅಸ್ಥಿಪಂಜರವಾಗಿದ್ದಿತು. ಇಡೀ ಶರೀರದ ಚರ್ಮ ಚಿರುಟಿಕೊಂಡಿತ್ತು. ಆದರೂ ಒಂದು ಬಗೆಯ ಕಾಂತಿಯಿಂದ ಕಾಣುತ್ತಿತ್ತು ! ಕಣ್ಣುಗಳು ಬೆಂಕಿ ಕಿಡಿಗಳ ಹಾಗೆ ಹೊಳೆಯುತ್ತಿದ್ದುವು – ಭಯ ಹುಟ್ಟಿಸುವಂತೆ, ಆ ಭಯ ಹೆಚ್ಚುವ ಹಾಗೆ ಬೆರಳುಗಳ ಉದ್ದುದ್ದದ ಉಗುರುಗಳು ಬಾವು ತಿರುಗಿ ಐದೈದು ಹೆಡೆಗಳ ಸರ್ಪಗಳಂತಿದ್ದುವು. ಕಾಲುಗುರುಗಳೂ ಬಾವುಬಗ್ಗಿ ಭಯಂಕರವಾಗಿದ್ದುವು.



"ಏನು ಸಂಗತಿ ? ನಿನ್ನ ಪ್ರಯತ್ನ ಫಲಿಸಿತೇ ?" ಎಂದು ಕೇಳಿದಳು ಆ ಮಹಾಮಾಂತ್ರಿಕೆ ಮುದುಕಿ.

ವೀರವಿಕಟ ಮಾಂತ್ರಿಕನು ಆಕೆಯ ಪಾದಗಳಿಗೆ ಸಾಷ್ಟಾಂಗ ನಮಸ್ಕಾರ ಹಾಕಿ ಎದ್ದು ನಿಂತು, "ಹೌದಮ್ಮಾ ! ಆ ಮಣಿ ಈಗ ರಾಜಕುಮಾರಿ ಯುವರಾಣಿಯ ಕಂಠಹಾರದಲ್ಲಿದೆ. ಅದಿನ್ನು ಬೇಗನೇ ನನ್ನ ಕೈಗೆ ಬರುತ್ತದೆಂದು ಭಾವಿಸುತ್ತೇನೆ" ಎಂದನು.

"ಒಂದು ಮಣಿ ಮಾತ್ರವೇನಾ ನಿನ್ನ ಕೈಗೆ ಬರುವುದು ?" ಎಂದು ಅಡ್ಡಗಣ್ಣಿನಿಂದ ನೋಡುತ್ತಾ ಕೇಳಿದಳು ಮುದುಕಿ.

ಕೂಡಲೇ ಉತ್ತರ ಹೇಳಲಾಗದೆ ವೀರವಿಕಟನು ಮೌನವಾಗಿ ನೋಡತೊಡಗಿದನು. ಅವನ ಪೊಲಬನ್ನು ನೋಡಿ ಮುದುಕಿ ಗುಹೆಯೇ ಮಾರ್ಮೊಳಗುವಂತೆ ವಿಚಿತ್ರ ಧ್ವನಿಯಿಂದ ಬೆಡಿ ಸಿಡಿಯುವ ಹಾಗೆ ನೆಗಾಡಿದಳು.

"ನಿನ್ನ ಉದ್ದೇಶ ಅರ್ಥವಾಗಲಿಲ್ಲ ಅಮ್ಮಾ. ಆ ಮಣಿಯೊಂದಿಗೆ ಮತ್ತೇನಾದರೂ ಬೇಕೆಂದು ಕೇಳುವಿಯಾ ?" ಎಂದು ಕೇಳಿದನು ವೀರವಿಕಟ.

"ಬೇರೇನೋ ನನಗೇಕೋ ಮೂರ್ಖನೇ ! ನೀನು ದೊಡ್ಡದಾಗಿ ಭಾವಿಸುವ ಆ ಚಂದ್ರಕಾಂತ ಮಣಿ ಮಾತ್ರ ತಂದರೆ ಸಾಕು ಅಂತ ನಾನೇನಾದರೂ ಹೇಳಿದ್ದೇನೋ ?" ಎಂದು ಪ್ರಶ್ನಿಸಿದಳು ಮಂತ್ರಗಾತಿ ಮುದುಕಿ.

"ಇಲ್ಲ. ಆ ಮಣಿಯನ್ನು ಹೇಗೆ ಸಾಧಿಸಿಕೊಳ್ಳಬೇಕೆಂಬುದನ್ನು ನೀನು ತಿಳಿಸಿರುವಿ. ಅದು ಕೂಡಾ ನನಗಾಗಿ ತಾನೇ ? ಅದಕ್ಕೆ ನಿನ್ನ ಕರುಣಾ ಸ್ವಭಾವವೇ ಕಾರಣವಮ್ಮಾ" ಎಂದನು ವೀರವಿಕಟ ವಿನಯದಿಂದ.

"ಅದಕ್ಕೇ ನಿನ್ನನ್ನು ಮೂರ್ಖನೆಂದೆನು. ಅದಕ್ಕೆ ಕಾರಣ ನನ್ನ ಕರುಣೆಗಿರುಣೆ ಕಾರಣವಲ್ಲಪ್ಪಾ. ಕರುಣೆ ಎಂದರೆ ಏನೆಂಬುದೇ ನನಗೆ ಗೊತ್ತಿಲ್ಲ. ಅದರ ಮೇಲೆ ನಿರ್ಮಲ ಅಂದರೇನು ನಿನ್ನ ಬೊಜ್ಜ ? ನನಗೆ ಐಶ್ವರ್ಯದ ಮೇಲೆ ಆಶೆಯೂ ಇಲ್ಲ. ನೀನೇನೋ ಮಹಾರಾಜನಾಗಬೇಕೆಂದು ತಹತಹ ತಪಿಸುತ್ತಿರುವಿ. ರಾಜನಾಗಬೇಕಾದ ರಹಸ್ಯ ನನಗೆ ಗೊತ್ತಿದ್ದುದರಿಂದ ನಿನಗೆ ಸಹಾಯ ಮಾಡುತ್ತಿದ್ದೇನೆ. ನಿನ್ನನ್ನು ನಾನು ಸಾಧಾರಣ ರಾಜನಾಗಿ ಅಲ್ಲ, ಈ ಪ್ರಪಂಚಕ್ಕೇ ಚಕ್ರವರ್ತಿ ಮಾಡುತ್ತೇನೆ" ಎಂದಳು ಮಂತ್ರಗಾತಿ ಮುದುಕಿ.

"ನಿನ್ನ ಉಪಕಾರ ಈ ಜನ್ಮದಲ್ಲಿ ಮರೆಯಲಾರೆನು !" ಎಂದನು ವೀರವಿಕಟ ಮಾಂತ್ರಿಕ.

"ಇಂಥಾ ಬಾಯಿಮಾತಿನ ಉಪಚಾರ ನನಗೆ ಬೇಡ. ನಾನು ಮಾಡುವ ಸಹಾಯಕ್ಕೆ ತಕ್ಕ ಪ್ರತಿಫಲ ನನಗೆ ಸಿಕ್ಕಬೇಕು. ಅದು ನಿನ್ನಿಂದ ಬರಬೇಕು" ಎಂದಳು ಮುದುಕಿ.

"ಅದೇನು ಪ್ರತಿಫಲವೆಂದು ದಯಮಾಡಿ ಹೇಳಮ್ಮಾ ?" ಎಂದನು ವೀರವಿಕಟ.

"ನನಗೆ ಇರುವುದೆಲ್ಲಾ ಒಂದೇ ಒಂದು ಕೋರಿಕೆ. ನಾನು ಕಳೆದುಕೊಂಡ ಯೌವನವನ್ನು ಮತ್ತೆ ಪಡೆದುಕೊಳ್ಳಬೇಕು. ಅದಕ್ಕಾಗಿ ನೀನು ಆ ಮಣಿಯೊಂದಿಗೆ, ಆ ಯುವರಾಣಿ ಕೃಷ್ಣಕುಮಾರಿಯನ್ನು ಕೂಡಾ ತರಬೇಕು. ತಂದು ನನ್ನ ಕಾಲೂಡದಲ್ಲಿ ಎತ್ತಿಹಾಕಬೇಕು. ಆ ಯುವರಾಣಿಯ ಯೌವನವನ್ನು ನಾನು ನನ್ನ ಮುನ್ನೂರು ವರ್ಷ ವಯಸ್ಸಿನ ಈ ಚೂಪು ಹಲ್ಲುಗಳಿಂದ ಕಚ್ಚಿ ಅವಳು ಎಲುಬು ಗೂಡಾಗುವವರೆಗೂ ಈ ಮುದುಕಿ ಹೀರಿಕೊಳ್ಳುತ್ತಾಳೆ!" ಎಂದು ಹೇಳಿ ಮುದುಕಿ ಗಟ್ಟಿಯಾಗಿ ನಕ್ಕಳು.

ಈ ಮಾತು ಕೇಳಿದ ಕೂಡಲೇ ಮೈ ಜುಮ್ಮಾಗಿ ವೀರವಿಕಟನೂ ಅಪೂರ್ವನು ಕೂಡಾ ಬೆಚ್ಚಿ ಗಡಗಡಿಸಿಬಿಟ್ಟರು.

"ಇದಕ್ಕೆ ಮೊದಲು ಕೂಡ ಕೆಲವು ಮಂದಿ ಯುವತಿಯರನ್ನು ಬಲಿಕೊಟ್ಟು ಅವರ ಯೌವನವನ್ನು ಹೊಂದಲು ನೀನು ಪ್ರಯತ್ನಿಸಿದಿಯಲ್ಲವೇ? ಆದರೂ ನೀನು ಎಂದಿನಂತೆಯೇ ಇರುವಿ ಹೌದಾ? ಯಾವ ಬದಲಾವಣೆಯೂ ಬರಲಿಲ್ಲವಲ್ಲಾ? ಇದೂ ಹಾಗೆಯೇ ಆದರೆ?" ಎಂದು ತನ್ನ ಅನುಮಾನವನ್ನು ವ್ಯಕ್ತಪಡಿಸಿದನು ವೀರವಿಕಟ.

"ಅಪಶಕುನದ ಹಾಗೆಲ್ಲಾ ಗಳಹಬೇಡ. ಆಗಿನ ನನ್ನ ಪ್ರಯತ್ನ ವಿಫಲವಾದ ಸಂಗತಿ ಬೇರೆ. ಅವರಾರೂ ರಾಜಭೋಗದ ಕೊಬ್ಬು ಬಂದವರಲ್ಲ. ಮೂರ್ಖನೇ, ಈಗ ನನ್ನ ಪ್ರಯತ್ನ ಖಂಡಿತ ಸಫಲವಾಗುವುದೆಂದು ನನಗೆ ಗಟ್ಟಿ ನಂಬುಗೆ. ಏಕೆಂದರೆ ಅದಕ್ಕೆ ಬೇಕಾದ ಮುಖ್ಯ ಮಹತ್ತಿನ ಅರ್ಹತೆ ರುದ್ರಪುರಿಯ ಯುವರಾಣಿಗೆ ಇವೆ. ಆ ರಾಜಕುಮಾರಿಯ ಯೌವನವಷ್ಟನ್ನೂ ನನ್ನ ಶರೀರಕ್ಕೆ ಹೀರಿ ಹರಡಿಸುತ್ತೇನೆ. ಹೋಗು! ಹೋಗೋ! ಆಗ ನೋಡು ನನ್ನ ಆನಂದವನ್ನು! ಆಹಾ! ಮತ್ತೆ ಯೌವನವು ಬಂದರೆ ಎಷ್ಟು ಆನಂದ! ಅಳೆಯಲು ಸಾಧ್ಯವೇ? ನಾನೆಷ್ಟು ಅಂದಚೆಂದದವಳಾಗುವೆನೆಂದು ಊಹಿಸಲಿಕ್ಕೂ ನಿನ್ನಿಂದ ಸಾಧ್ಯವಿಲ್ಲ" ಎಂದು ನಗುತ್ತಾ ಹೇಳಿದಳು ಮಾಂತ್ರಿಕ ಮುದುಕಿ.

"ನೀನು ಈಗ ಕೂಡಾ ಸುಂದರಿಯಾಗಿಯೇ ಇರುವಿ" ಎಂದನು ವೀರವಿಕಟ ಮಂತ್ರವಾದಿ.

"ಬಾಯಿ ಮುಚ್ಚು ಮೂರ್ಖಾ! ನಿನ್ನ ಕಪಟ ನಾಟಕಗಳು ನನ್ನ ಹತ್ತಿರ ಸಾಗಲಾರವು. ನನ್ನಿಂದ ನಿನ್ನ ಕೆಲಸವಾಗಬೇಕೆಂದು ನನ್ನನ್ನು ಸುಮ್ಮನೆ ಹೊಗಳಬೇಡ. ಗೊತ್ತಾಯಿತಷ್ಟೆ? ಸುಮ್ಮನೆ ಹೊಗಳದೆ ಹೇಳಿದ ಕೆಲಸ ಮಾಡು. ಭಾವೀ ಚಕ್ರವರ್ತಿಯೇ! ಈಗಲೇ ಇಲ್ಲಿಂದ ನಡಿ!" ಎಂದು ಕೀಚು ಕಂಠದಿಂದ ಗಟ್ಟಿಯಾಗಿ ಅರಚಿದಳು ಮಂತ್ರವಾದಿ ಮುದುಕಿ.

—(ಇನ್ನೂ ಇದೆ)





# ಅಪೂರ್ವನ ಸಾಹಸ ಯಾತ್ರೆಗಳು

## ೧೨

[ ರುದ್ರಪುರಿಯ ಪ್ರಧಾನ ಮಂತ್ರಿಯೂ, ದುಷ್ಟ ಮಾಂತ್ರಿಕ ವೀರವಿಕಟನೂ, ಕಂಠಹಾರದಲ್ಲಿದ್ದ ಚಂದ್ರಕಾಂತ ಮಣಿಯನ್ನು ಅಪಹರಿಸಲು ದುಸ್ತಂತ್ರ ಮಾಡಿದರು. ವೀರವಿಕಟನು ಆ ವಿಷಯವನ್ನು ತನ್ನ ಗುರುವಾದ ಮುದಿ ಮಾಂತ್ರಿಕಳ ಹತ್ತಿರ ಹೇಳಿದನು. ಯುವರಾಣಿಯನ್ನು ಜೀವದೊಂದಿಗೆ ತನಗೆ ಒಪ್ಪಿಸಬೇಕೆಂದು ಆ ಮುದಿ ಮಾಂತ್ರಿಕೆ ವೀರವಿಕಟನಿಗೆ ಆಜ್ಞೆ ಮಾಡಿದಳು. ಇದೆಲ್ಲಾ ಗೊತ್ತಾಯಿತು ಅಪೂರ್ವನಿಗೆ. —ಆಮೇಲೆ ]

ದುರ್ಗಮನೀಯವಾದ ಕಡುಗುಟ್ಟಿನ ಘೋರ ಗುಹೆಯೊಳಗೆ ಊಹಿಸಿದರೆ ಮೈ ಜುಮುಗುಟ್ಟಿಸುವ ಭಯಂಕರ ಮಾಂತ್ರಿಕಳ ಬಾಯಿಗೆ ಸೇರಲಿರುವ ರಾಜಕುಮಾರಿಯನ್ನು ನೆನೆದು ಅಯೋನಿಜನಾದ ಅಪೂರ್ವನು ತನ್ನ ಗುರುವನ್ನು ಸ್ಮರಿಸುತ್ತ ಆಲೋಚನೆಗೆ ಬಿದ್ದನು.

ಆ ವರ್ಷ ಸಕಾಲದಲ್ಲಿ ಸಾಕಾಗುವಷ್ಟು ಮಳೆ ಬಿದ್ದುದರಿಂದ ರುದ್ರಪುರಿ ರಾಜ್ಯದೊಳಗೆ ಬಹು ಚೆನ್ನಾಗಿ ಬೆಳೆ ಬಂದಿದ್ದುವು. ಯಾವ ಕೊರತೆಯೂ ಇರಲಿಲ್ಲ.

ಸುಖ ಸಂತೋಷಗಳಲ್ಲಿ ಓಲಾಡುವ ಪ್ರಜೆಗಳು ಯುವರಾಣಿಯ ಜನ್ಮ ದಿನೋತ್ಸವವನ್ನು ಕಾದು ಕೊಂಡಿದ್ದರು. ತನ್ನ ರಾಜ್ಯದ ಭಾವೀ ರಾಣಿಯ ಜನ್ಮದಿನವನ್ನು ವಿವಿಧ ರೀತಿಯ ವಿನೋದಗಳಿಂದ ವಿಶೇಷವೆನಿಸುವಂತೆ, ಮಹೋತ್ಸವವಾಗಿಯೇ ಜರುಗಿಸಬೇಕೆಂದು ವಿಶ್ವವರ್ಮ ಮಹಾರಾಜನು ಕೂಡಾ ನಿರ್ಣಯಿಸಿಕೊಂಡನು.

ಈ ಸಂಗತಿಯನ್ನು ತಿಳಿದ ಕೂಡಲೇ ಆ ದುಷ್ಟ ಮಂತ್ರಿಗಾದ ಸಂತೋಷ ಅಷ್ಟಿಷ್ಟಲ್ಲ. ಅವನು ಬಹಳ ಉತ್ಸಾಹದಿಂದ ವಿಶ್ವವರ್ಮ ರಾಜನ ಬಳಿಗೆ



ಹೋಗಿ, "ಮಹಾಪ್ರಭೂ. ನಮ್ಮ ಯುವರಾಣಿಯ ಜನ್ಮದಿನ ತೀರ ಹತ್ತಿರ ಬಂದುದನ್ನು ಜ್ಞಾಪಕಪಡಿಸಲಿಕ್ಕೇ ಕರೆಯದೆ ಬಂದುಬಿಟ್ಟೆನು. ಈ ಸಾರಿಯ ಜನ್ಮದಿನೋತ್ಸವವನ್ನು ಈವರೆಗೆ ಯಾರೂ ಕಂಡು ಕೇಳಿ ಅರಿಯದಷ್ಟು ಘನ ವೈಭವದಿಂದ ನಡೆಸಲು ಅಪ್ಪಣೆಯಾಗಬೇಕು! ಪ್ರಜೆಗಳ ಬಯಕೆಯೂ ಇದೇ ಪ್ರಭೂ!" ಎಂದನು.

ತಾನು ಯೋಚಿಸಿದ್ದನ್ನೇ ಮಂತ್ರಿ ಹೇಳಿದ್ದು ಕೇಳಿ ರಾಜನಿಗೆ ಆಶ್ಚರ್ಯವಾಯಿತು. ರಾಜಕುಮಾರಿಯ ಮೇಲಿನ ಅಭಿಮಾನದಿಂದಲೇ ಮಂತ್ರಿ ಹೀಗೆನ್ನುವನೆಂದು ಭಾವಿಸಿ, ರಾಜನು ತನ್ನ ಪ್ರಧಾನ ಮಂತ್ರಿಯ ರಾಜಭಕ್ತಿಗೆ ಮೆಚ್ಚಿಕೊಳ್ಳುವವನಂತೆ ಮುಗುಳ್ನಗುತ್ತ ತಲೆದೂಗಿದನು.

ಆ ದಿನ ಮಳೆಗಾಲದ ರಾತ್ರಿಯಲ್ಲಿ ಆಕಾಶದ ತುಂಬಾ ಕಾರ್ಮೋಡ ಕವಿದುಕೊಂಡಿತ್ತು. ಕಣ್ಣು ಕುತ್ತಿದರೂ ಕಾಣಿಸದಷ್ಟು ಕಾರ್ಗತ್ತಲೆ ಕವಿದಿತ್ತು. ಆಗಾಗ ಥಳಕ್ ಪಳಕ್ ಮಿಂಚು. ಎಡೆಯೆಡೆಯಲ್ಲಿ ಗುಡುಗು, ಹೆಗ್ಗುಡುಗು. ಕಣ್ಣು ಕೋರೈಸುವ ಮಿಂಚಿನ ಬೆನ್ನಿನಲ್ಲೇ ಅಪ್ಪಳಿಸುವಂತಹ ಬರಸಿಡಿಲು! ಹನಿಹನಿ ಮಳೆ, ಥಕ್ಕನೆ ಜೋರುಜೋರಾಗಿ ಮತ್ತೆ ಸ್ವಲ್ಪ ಹೊತ್ತು ಸಣ್ಣ ಹನಿ!

ಅಂತಹ ವೇಳೆಯಲ್ಲಿ ವೀರವಿಕಟ ಮಾಂತ್ರಿಕನು ಕರ್‍ರಗಿನ ದುಸ್ತುಗಳನ್ನು ಧರಿಸಿ, ಬೆಳಂಜಾಮಕ್ಕೆ ಮೊದಲೇ ತನ್ನ ವಾಹನವಾದ ಕರಡಿಯ ಮೇಲೇರಿಕೊಂಡು ಅರಣ್ಯದಿಂದ ರುದ್ರಪುರಿಯ ಮೇರೆಯಲ್ಲಿರುವ ದುರ್ಗಾಮಾತೆಯ ಆಲಯದ ಕಡೆಗೆ ಸಾಗುತ್ತಿದ್ದನು. ಆ ದೇವಾಲಯದ ದೇವಿ, ರಾಜಕುಟುಂಬಕ್ಕೆ ಮಾತ್ರವಲ್ಲದೆ ರುದ್ರಪುರಿ ರಾಜ್ಯಕ್ಕೇ ಅಧಿದೇವತೆಯಾದ ಮಹಾ ದುರ್ಗಾಮಾತೆ! ಅಂತಹ ದುರ್ಗಾಮಾತಾಲಯವು ಅರಣ್ಯದ ಸಮೀಪದಲ್ಲಿದ್ದುದರಿಂದ ಅಲ್ಲಿ ಸಾದಾ ದಿನಗಳಲ್ಲಿ ಅಷ್ಟೇನೂ ಜನಸಂಚಾರವಿರುವುದಿಲ್ಲ.

ಅರ್ಚಕನು ಬೆಳಕಿರುವಾಗಲೇ ಬಂದು ಧೂಪದೀಪ ನೈವೇದ್ಯ ಆರಾಧನೆಗಳನ್ನು ಮಾಡಿ ಕತ್ತಲಾಗುವುದಕ್ಕೆ ಮೊದಲೇ ಹೋಗುತ್ತಿದ್ದನು. ಭಕ್ತರೂ ಅವನಿರುವಾಗಲೇ ದೇವಾಲಯಕ್ಕೆ ಬರುತ್ತಿದ್ದರು. ಒಟ್ಟಿನಲ್ಲಿ ಅದು ದೂರದಿಂದಲೇ ಕೈಮುಗಿಯುವ ಮಹಾದುರ್ಗಾಲಯ.

ಆ ದೇವಾಲಯಕ್ಕೆ ಸುಮಾರು ನೂರು ಗಜಗಳ ದೂರದಲ್ಲಿ ಅರಣ್ಯಕ್ಕೆ ಸೇರಿಕೊಂಡಿರುವ ವಟವೃಕ್ಷವು ಬಹು ದೊಡ್ಡದಾಗಿ ಆಕಾಶವನ್ನು ಮುತ್ತಿಡುವಂತೆ ಕಾಣುತ್ತಿತ್ತು. ಆ ವಟವೃಕ್ಷದ ಬಳಿಗೆ ಹೋದ ಮೇಲೆ ಮಾಂತ್ರಿಕನು ಕರಡಿಯ ಮೇಲಿಂದ ಕೆಳಗಿಳಿದು, "ಇಲ್ಲೇ ಇರು! ಅತ್ತಿತ್ತ ಕದಲಿದರೆ ಜಾಗ್ರತೆ!" ಎಂದು ಮೊದಲೇ ಹೆದರುತ್ತಿದ್ದ ಕರಡಿಯನ್ನು ಮತ್ತಿಷ್ಟು ಹೆದರಿಸುವಂತೆ ಹೇಳಿ, ದುರ್ಗಾಮಾತೆಯ ದೇವಾಲಯದ ಕಡೆಗೆ ನಡೆದನು.

ಎತ್ತರವಾದ ಆಲಯದ ದ್ವಾರಗೋಪುರದ ಹತ್ತಿರ ನಿಂತುಕೊಂಡಿದ್ದ ಒಬ್ಬನನ್ನು ನೋಡಿದ ಕೂಡಲೇ ವೀರವಿಕಟನು: "ನನ್ನ ಬರುವಿಕೆ ಸ್ವಲ್ಪ ಆಲಸ್ಯವಾಯಿತು. ಕ್ಷಮಿಸಬೇಕು. ಮಂತ್ರಗಾತಿಯ ಹತ್ತಿರ ಮತ್ತೊಮ್ಮೆ ಮಾತಾಡಿ ಬರುತ್ತಿದ್ದೇನೆ. ಆ ಮಹಾ ಮಾಂತ್ರಿಕಳು ನಿನಗೊಂದು ತಾಯತ್ತು ಕೊಟ್ಟಿದ್ದಾಳೆ. ನೀನು ಅದನ್ನು ಧರಿಸಿಕೊಂಡರೆ ನಿನ್ನಲ್ಲಿರುವ ಎಲ್ಲಾ ಭಯಗಳೂ ಮಂಗಮಾಯವಾಗುತ್ತದೆಂದು ಅಪ್ಪಣೆ ಕೊಟ್ಟಿದ್ದಾಳೆ" ಎಂದನು.

ಅಲ್ಲಿ ಕಾದು ನಿಂತಿದ್ದ ಪ್ರಧಾನ ಮಂತ್ರಿ "ಧನ್ಯನಾದೆನು ಮಿತ್ರ ಮಹಾ ಮಾಂತ್ರಿಕಾ. ನಿನ್ನ ಉಪಕಾರ ಈ ಜನ್ಮದಲ್ಲಿ ಮರೆಯಲಾರೆನು ನನ್ನ ಮಿತ್ರನು ಮಹಾ ಮಾಂತ್ರಿಕನಾದದ್ದು ನನ್ನ ಪುಣ್ಯ!" ಎಂದು ವೀರವಿಕಟನಿಗೆ ನಮಸ್ಕಾರ ಮಾಡಿದನು.

ವೀರವಿಕಟನು ತನ್ನ ಚೀಲದೊಳಗಿದ್ದ ತಾಯತ್ತನ್ನು ತೆಗೆದು ಮಂತ್ರಿಯ ಕೈಮಣಿಗಟ್ಟಿನ ಮೇಲೆ ಕಟ್ಟಿದನು. ಹಾಗೆ ಕಟ್ಟಿಬಿಟ್ಟರೆ ಮಂತ್ರಿ ವೀರವಿಕಟನು ಹೇಳಿದ ಹಾಗೆ ಮಾಡುವವನಾಗುತ್ತಾನೆಂದು ಆ ವೃದ್ಧ ಮಾಂತ್ರಿಕಳು ಹೇಳಿದ್ದಳು. ಅದೇನೂ ತಿಳಿಯದ ಮಂತ್ರಿ, ಅದನ್ನು ನೋಡುತ್ತ ತಡವುತ್ತ ಕಣ್ಣಿಗೊತ್ತಿಕೊಳ್ಳುತ್ತ ಸಂತೋಷದಿಂದ ಉಕ್ಕುತ್ತಿದ್ದನು.

"ಯುವರಾಣಿ ಹುಟ್ಟಿದ ದಿನ, ಅವಳು ಈ ದೇವಿಯ ದರ್ಶನಕ್ಕೆ ಬರಲು, ನಮ್ಮ ಅನುಕೂಲಕ್ಕೆ ತಕ್ಕ ಹಾಗೆ ಪಂಚಾಂಗ ನೋಡಿಸಿ ಶುಭ ಮುಹೂರ್ತ ನಿಶ್ಚಯವಾಗಿದೆಯಾ?" ಎಂದು ಮಾಂತ್ರಿಕನು ತನ್ನ ಉದ್ದವಾದ ಗಡ್ಡದ ಕೂದಲು ತಡವುತ್ತಾ ಕೇಳಿದನು.

"ಓ ಹೇಳಿದ್ದೇನೆ. ಸೂರ್ಯಾಸ್ತವಾದ ಮೇಲೆ ಒಂದು ಘಂಟೆ ಎರಡೂವರೆ ಗಳಿಗೆಯಾದ ಮೇಲೆ ಬೆಳಗಾಗುವವರೆಗೂ ಒಳ್ಳೆಯ ಹೊರಡುವ ಮುಹೂರ್ತವೆಂದಿದ್ದೇನೆ" ಎಂದನು ಮಂತ್ರಿ.



"ಆ ರಾತ್ರಿ ಕೃಷ್ಣಪಕ್ಷದ ಕತ್ತಲೆಯಾಗಿರಬೇಕಾಗಿರುವುದರಿಂದ ಒಂದು ತಿಂಗಳು ಕಾಯಬೇಕೆಂದು ಅದಕ್ಕೇ ಹೇಳಿದೆ!" ಎಂದನು ವೀರವಿಕಟನು ಗರ್ವದಿಂದ ನಗುತ್ತಾ.

"ನಿಜ ಮಿತ್ರಾ. ನಮ್ಮ ಪಥಕವು ನಿರಾತಂಕವಾಗಿ, ನಡೆಯುತ್ತದೆಂಬುದರಲ್ಲಿ ನನಗೆ ರವಷ್ಟೂ ಸಂದೇಹವಿಲ್ಲ. ಈಗ ದೇವಾಲಯದ ಬಾಗಿಲು ತೆರೆಯಲಿಕ್ಕಾಗಿ ಬೀಗದ ಕೈ ಕೂಡಾ ತಂದಿದ್ದೇನೆ. ನನ್ನ ಲೆಕ್ಕದಂತೆ ಮಳೆಗಾಲದ ಕೃಷ್ಣಪಕ್ಷದ ದಿನವನ್ನು ಆರಿಸಿದ್ದು ಒಳ್ಳೆಯ ಅನುಕೂಲವಾಗಿಯೇ ಕೂಡಿ ಬಂತು. ಒಂದುವೇಳೆ ರಾಜ ಕುಟುಂಬಕ್ಕೆ ಸೇರಿದವರಿಂದ ಫಕ್ಕನೆ ಆಪತ್ತೇನಾದರೂ ಬಂದುಬಿಟ್ಟರೆ ತಪ್ಪಿಸಿಕೊಳ್ಳಲಿಕ್ಕೆ ಅನುಕೂಲವಾಗಿ ಆಲಯದ ಗರ್ಭಗೃಹದಿಂದ ರಹಸ್ಯ ಸುರಂಗ ಮಾರ್ಗವಿದೆಯೆಂದು ಹೇಳಿದ್ದೇನಷ್ಟೆ? ಅದನ್ನು ಹೇಗೆ ತೆರೆಯಬೇಕು. ಮುಚ್ಚಬೇಕೆಂಬುದು ನನಗೆ ಗೊತ್ತಿದೆ. ಈಗ ಅದೇನೂ



ಪಾಳಾಗಿಲ್ಲ. ಇದುವರೆಗೂ ಅದನ್ನು ಉಪಯೋಗಿಸುವ ಅಗತ್ಯ ಬಂದಿರಲಿಲ್ಲ. ರಾಜಕುಟುಂಬಕ್ಕೆ ಅದರ ನೆನಪು ಕೂಡಾ ಇರಲಾರದು. ಅದೀಗ ನಮ್ಮ ಉಪಯೋಗಕ್ಕೆ ಬಂತು. ಒಳಗೆ ಹೋಗಿ ನೋಡೋಣವೆ ? " ಎಂದು ಮಂತ್ರಿ ಉತ್ಸಾಹದಿಂದ ಗುಡಿಯ ದ್ವಾರದ ಕಡೆಗೆ ನಡೆದನು. "ಹೌದು. ನೋಡೋಣ. ಅದಕ್ಕೆತಾನೇ ಬಂದೆನು !" ಎಂದನು ವೀರವಿಕಟ.

ಮಂತ್ರಿ ಗುಡಿಯ ಬಾಗಿಲನ್ನು ತೆರೆದನು. ಇಬ್ಬರೂ ಒಳಗೆ ಹೊಕ್ಕು, ಬಾಗಿಲನ್ನು ಸುಮ್ಮನೆ ಮುಚ್ಚಿಕೊಂಡರು. ದುರ್ಗಾಮಾತೆಯ ವಿಗ್ರಹದ ಮುಂದೆ ಮಂತ್ರಿ ಪ್ರಮಿದೆಯ ದೀಪಗಳಿಂದ ಚಿಕ್ಕದೊಂದು ದೀವಿಟಿ ಬೆಳಗಿಸಿ ಬೆಳಕು ಹರಡಿಸಿದನು. ವಿಗ್ರಹದ ಮುಂದೆ ಚಿಕ್ಕ ಚಿಕ್ಕ ಮಣ್ಣಿನ ಪ್ರಮಿದೆಗಳಲ್ಲಿ ಅರ್ಚಕನು ಹಚ್ಚಿಟ್ಟ ದೀಪಗಳು ಬೆಳಗಿಕೊಂಡಿದ್ದುವು. ದೇವೀ ವಿಗ್ರಹದ ಹಿಂದೆ ಗೋಡೆಗೆ ನಡುವೆ ಸ್ವಲ್ಪ ಖಾಲೀ ಜಾಗವಿತ್ತು. ಆ ಗೋಡೆಯಲ್ಲಿ ಅನೇಕ ವಿಧದ ಶಿಲ್ಪಗಳಿದ್ದುವು.

ಮಂತ್ರಿ ಕೈಯಲ್ಲಿದ್ದ ದೀವಿಟಿಯನ್ನು ಕೆಳಗೆ ಒರಗಿಸಿಟ್ಟು, ರಾಕ್ಷಸಾಕಾರದ ಒಂದು ಶಿಲ್ಪದ ಬಾಯಿಯನ್ನು ಎರಡು ಕೈಗಳಿಂದಲೂ ಹಿಡಿದು ತೆರೆದನು. ಕೂಡಲೇ ವಿಗ್ರಹದ ಹಿಂಗಡೆಯ ನೆಲದಲ್ಲಿ ಸುರಂಗದ ಬಾಗಿಲು ತೆರೆದುಕೊಂಡಿತು.

ಮಂತ್ರಿಯೂ, ಮಾಂತ್ರಿಕನೂ ಕಗ್ಗತ್ತಲೆಯ ಸುರಂಗದೊಳಗೆ ಇಳಿದರು.

ಅದುವರೆಗೂ ಅವರಿಗೆ ಗೊತ್ತಿಲ್ಲದಂತೆ ಅವರನ್ನು ಬೆಂಬತ್ತಿಕೊಂಡೇ ಇದ್ದ ಅಪೂರ್ವನು, ಅಲ್ಲಿಯೇ ಇದ್ದು ರಹಸ್ಯ ಸುರಂಗ ಮಾರ್ಗವನ್ನು ಮುಚ್ಚಿಬಿಡೋಣವೇ ಎಂದು ಕ್ಷಣಕಾಲ ಆಲೋಚಿಸಿದನು. ಆದರೆ ಆ ದುಷ್ಟರು ಸುರಂಗದ ಕೊನೆಯ ಬಾಗಿಲಿನಿಂದ ತಪ್ಪಿಸಿಕೊಂಡು ಹೋಗುವ ಸಾಧ್ಯತೆ ಇದೆ ಎಂದು ಗೊತ್ತಾಗಿ, ಆದರಿಂದ ದೊಡ್ಡ ಪ್ರಯೋಜನವಿಲ್ಲವೆಂದು ಸುಮ್ಮನಾದನು. ಸುರಂಗದ ಇನ್ನೊಂದು ದ್ವಾರ ಎಲ್ಲಿರುವುದೆಂದು ಅಪೂರ್ವನಿಗೆ ತಿಳಿಯದು. ಅದನ್ನು ತಿಳಿದುಕೊಳ್ಳಲು ಅವರೊಂದಿಗೆ ತಾನೂ ಸುರಂಗದೊಳಗೆ ಇಳಿಯುವುದೇ ಒಳ್ಳೆಯದೆಂದುಕೊಂಡು, ಒಂದಡಿ ಮುಂದಿಡುವುದರೊಳಗೆ, ಸುರಂಗ ದ್ವಾರದ ರಾಕ್ಷಸ ಶಿಲ್ಪದ ಬಾಯಿ ಮುಚ್ಚಿಹೋಯಿತು. ಅದರೊಂದಿಗೆ ಸುರಂಗದ ಬಾಗಿಲೂ ಮುಚ್ಚಿಹೋಯಿತು. ಸುರಂಗ ದ್ವಾರವು ಮಾಯವಾಗುವಂತೆ ಸುರಂಗದೊಳಗೇ ತಕ್ಕ ಏರ್ಪಾಡು ಇರುವಂತೆ ಗೊತ್ತಾಯಿತು ಅಪೂರ್ವನಿಗೆ.

ಗುಡಿಯ ಬಾಗಿಲುಗಳು ತೆರೆದೇ ಇದ್ದುವು. ಅವುಗಳನ್ನು ಮುಚ್ಚದೆ ಮಂತ್ರಿಯೂ, ಮಾಂತ್ರಿಕನೂ ಗುಡಿಯಿಂದ ಹೊರಗೆ ಹೊರಟು ಹೋಗುವ ಸಾಧ್ಯತೆ ಇಲ್ಲ. ಆದ್ದರಿಂದ ಅವುಗಳನ್ನು ಮುಚ್ಚಲು ಅವರಿಬ್ಬರೂ ಬಂದೇ ಬರುವರು. ಹೀಗೆಂದು



ಕೊಂಡು ಅಪೂರ್ವನು ಗುಡಿಯೊಳಗಿನಿಂದ ಹೊರಗೆ ಬಂದು ಒಂದು ಕಂಬದ ಮರೆಯಲ್ಲಿ ಕುಳಿತುಕೊಂಡನು.

ಅವನು ಅಂದುಕೊಂಡಂತೆಯೇ ಒಂದು ಘಂಟೆ ಕಳೆದ ಕೂಡಲೇ ಮಂತ್ರಿ–ಮಾಂತ್ರಿಕರು ಗುಡಿಯೊಳಗಿನಿಂದ ಹೊರಗೆ ಬಂದರು. ಮಂತ್ರಿ ಬಾಗಿಲು ಮುಚ್ಚಿ ಬೀಗ ಹಾಕುತ್ತ ಮಾಂತ್ರಿಕನೊಂದಿಗೆ, "ನಾನು ಯುವರಾಣಿಯನ್ನು ಸುರಂಗ ಮಾರ್ಗದೊಳಗೆ ದೂಡಿದ ಕೂಡಲೇ, ಅವಳನ್ನು ಒಳಗೆ ಒಯ್ದು ಕೊಂಡು ನಾನು ತೋರಿಸಿದಂತೆ ಒಳಗಿನಿಂದ ಪ್ರವೇಶ ದ್ವಾರವನ್ನು ಮುಚ್ಚುವ ಕೆಲಸ ನಿನ್ನದು. ಸುರಂಗ ಮಾರ್ಗದಿಂದ ಯುವರಾಣಿಯನ್ನು ಅರಣ್ಯದ ನಡುವಿಗೆ ಎತ್ತಿಕೊಂಡು ಹೋಗಿ ನಿನ್ನ ಕಡೆಯವರಿಗೆ ಒಪ್ಪಿಸಿಬಿಡಬೇಕು. ಅವರು ಅವಳನ್ನು ಅಲ್ಲಿಂದ ಮಂತ್ರಗಾತಿಯ ಬಳಿಗೆ ಒಯ್ದುಬಿಡಬೇಕು" ಎಂದನು.

"ನನ್ನ ಕಡೆಯವರು ಎಡೆಯವರು ಯಾರೂ ಅಲ್ಲ! ಸಾಕ್ಷಾತ್ ಮಹಾ ಮಾಂತ್ರಿಕ ವೃದ್ಧೆಯೇ ಅಲ್ಲಿ ಕಾದಿರುತ್ತಾಳೆ! ಕೋಳೀ ಮರಿಯನ್ನು ಹದ್ದು ಹಾರಿಸಿಕೊಂಡು ಹೋಗುವ ಹಾಗೆ ಅವಳೇ ಯುವ ರಾಣಿಯನ್ನು ಹಗುರಾಗಿ ಹಾರಿಸಿಕೊಂಡು ಹೋಗುತ್ತಾಳೆ!" ಎಂದನು ವೀರವಿಕಟ ಮಾಂತ್ರಿಕ.

"ಶಾಭಾಸ್! ಎಲ್ಲಾ ಕ್ಷಣ ಮಾತ್ರದಲ್ಲೇ ಆಗಿ ಹೋಗಲಿ! ಏಕೆಂದರೆ ವಿನೋದಾವಳಿಯ ಉತ್ಸವ ಎಷ್ಟು ಕೋಲಾಹಲವಾಗಿ ನಡೆಯುತ್ತಿದ್ದರೂ ಯುವ ರಾಣಿ ಐದಾರು ನಿಮಿಷ ಕಾಣದೆ ಹೋದರೂ ಅವಳ ಗೆಳತಿಯರು ಕಂಡುಹಿಡಿದುಬಿಡುವಂಥವರು! ಆಮೇಲೆ ಅವಳನ್ನು ಹುಡುಕಲು ಪ್ರಾರಂಭಿಸುತ್ತಾರೆ. ನಮ್ಮ ಕೆಲಸಕ್ಕೆ ತುಂಬ ಎಚ್ಚರಿಕೆ ಅಗತ್ಯ!" ಎಂದನು ಮಂತ್ರಿ.

"ಯಾರೆಷ್ಟು ಹುಡುಕಿದರೇನು ಮಹಾ! ಯುವರಾಣಿಯನ್ನು ಸುರಂಗ ಮಾರ್ಗದೊಳಗೆ ದೂಡಲ್ಪಟ್ಟದ್ದು ಇನ್ನೊಬ್ಬರಿಗೆ ಗೊತ್ತಾದರೆ ತಾನೇ ಹುಡುಕಿ ಹಿಡಿಯಲಿಕ್ಕೆ! ಗರ್ಭ ಗೃಹದೊಳಗೊಂದು ರಹಸ್ಯ ಮಾರ್ಗವಿರುವುದೆಂದು ಯಾರಿಗೆ ತಾನೇ ಗೊತ್ತಿರುತ್ತೆ? ಗೊತ್ತಿರುವವರಿಗೆ ನೆನಪಾಗುವುದರೊಳಗೆ ನಮ್ಮ ಕೆಲಸ ತೀರಿಹೋಗುತ್ತೇ!" ಎಂದನು ವೀರವಿಕಟ!

"ಹೌದೌದು. ಈ ರಹಸ್ಯ ಮಾರ್ಗದ ವಿಷಯ, ರಾಜನಿಗೆ, ರಾಣಿಗೆ, ಆಲಯದ ಅರ್ಚಕನಿಗೆ, ಸೇನಾಧಿಪತಿಗೆ ಮತ್ತು ನನಗೆ ಮಾತ್ರವೇ ಗೊತ್ತು! ಬೇರೆ ನರ ಹುಳಕ್ಕೂ ತಿಳಿಯದು!" ಎಂದನು ಮಂತ್ರಿ.

"ಹಾಗೇನು? ಆದರೆ ಅರ್ಚಕನನ್ನು ಒಳಪಡಿಸಿಕೊಳ್ಳುವುದು ಕಷ್ಟವೆಂದು ಹೇಳುವಿಯಲ್ಲಾ? ಅವನು ನಮ್ಮ ಪಥಕವನ್ನು ತಿಳಿದು ರಾಜನಿಗೆ ಹೇಳಿಬಿಟ್ಟರೆ ಅಪಾಯ ಬರುತ್ತಪ್ಪೆ?" ಎಂದನು ವೀರವಿಕಟ.

"ಅದೇನೋ ನಿಜವೇ. ಏನು ಮಾಡೋಣ?" ಎಂದನು ಮಂತ್ರಿ, ಆಕಾಶದ ಕಡೆಗೆ ನೋಡುತ್ತಾ.

"ಸಾಯಂಕಾಲದಲ್ಲಿ ಯುವರಾಣಿ ದುರ್ಗಾ ಮಾತೆಯ ಆಲಯಕ್ಕೆ ಬರುವ ಮೊದಲೇ ಅರ್ಚಕನು ಬರುತ್ತಾನಷ್ಟೆ? ಆಗಲೇ ಅವನನ್ನು ಪರಲೋಕಕ್ಕೆ ಕಳಿಸಿಬಿಡುವಾ. ನಾನೇ ಅರ್ಚಕನ ಹಾಗೆ ವೇಷ ಹಾಕಿಕೊಂಡು ಯುವರಾಣಿಯನ್ನು ದೇವಾಲಯ ದೊಳಗೆ ಕರೆದುಕೊಂಡು, ವಿಗ್ರಹಕ್ಕೆ ಪ್ರದಕ್ಷಿಣೆ ಬರುವುದು ಶುಭಪ್ರದವೆಂದು ಹೇಳಿ ಒಳ್ಳೆಯ ಮಾತಿನಿಂದ ಪ್ರದಕ್ಷಿಣೆ ಮಾಡಿಸುತ್ತೇನೆ. ವಿಗ್ರಹದ ಹಿಂದೆ ಹೋದ ಕೂಡಲೇ ಅವಳನ್ನು ಸುರಂಗದೊಳಗೆ ದೂಡಿಬಿಡುತ್ತೇನೆ. ನಾನೂ ಧುಮುಕಿ ಸುರಂಗ ದ್ವಾರ ಮುಚ್ಚಿಬಿಡುತ್ತೇನೆ" ಎಂದನು ವೀರವಿಕಟ.

"ಆಲೋಚನೆ ಚೆನ್ನಾಗಿದೆ. ಆದಕ್ಕೆ ಅರ್ಚಕನ ಪ್ರಾಣ ತೆಗೆಯಬೇಕೇ? ಇನ್ನೊಂದು ದಾರಿ ಇದ್ದರೆ ಹೇಳಯ್ಯ. ಅರ್ಚಕ ಬಹಳ ಒಳ್ಳೆಯವನು!" ಎಂದನು ಮಂತ್ರಿ.

"ನೀನಿಷ್ಟು ಪುಕ್ಕಲು ಗುಂಡಿಗೆಯವನಾದರೆ ನಾಳೆ ಈ ಭೂ ಪ್ರಪಂಚವನ್ನು ಹೇಗೆ ಆಳುತ್ತೀ? ಹುಂ, ಸರಿ - ಚಿಂತೆ ಬಿಡು. ನಿನ್ನ ಇಷ್ಟ ಪ್ರಕಾರವೇ ಮಾಡುತ್ತೇನೆ. ನಮ್ಮ ಕೆಲಸ ಮುಗಿಯುವವರೆಗೆ ಅರ್ಚಕನನ್ನು ಯಾರಿಗೂ ಗೊತ್ತಾಗದ ರಹಸ್ಯ ಜಾಗ ದಲ್ಲಿ ಅಡಗಿಸೋಣ. ಸರಿಯಾಯಿತಷ್ಟೆ? ನಡೆ. ಹೋಗೋಣ" ಎಂದು ವೀರವಿಕಟನು ವಟವೃಕ್ಷದ ಕಡೆಗೆ ನಡೆದನು. ಮಂತ್ರಿ ಅವನಿಂದ ಅನುಮತಿ ತೆಗೆದುಕೊಂಡು ನಗರದ ಕಡೆಗೆ ನಡೆಯುತೊಡಗಿದನು.

ಅಷ್ಟರವರೆಗೆ ಒಂದು ಕಂಬದ ಮರೆಯಲ್ಲಿದ್ದು, ಅವರ ಸಂಭಾಷಣೆಗಳನ್ನು ಕೇಳಿಕೊಂಡಿದ್ದ ಅಪೂರ್ವನು, ತಾನು ಯಾರ ಹಿಂದೆ ಹೋಗ ಬೇಕೆಂದು ಸ್ವಲ್ಪ ಸಂಧಿಗ್ಧದಲ್ಲಿ ಬಿದ್ದವನಾಗಿ ನಿಂತನು. ಹೇಗೂ ಆ ದುರ್ಮಾರ್ಗಿಗಳು ತಲೆಹಾಕಿದ ತಂತ್ರ ತನಗೆ ತಿಳಿದುಹೋಯಿತಷ್ಟೆ? ಇನ್ನು ಅವರ ಹಿಂದೆ ಹೋಗುವುದಕ್ಕಿಂತ, ಈ ವಿಷಯವನ್ನು ರಾಜಾ ವಿಶ್ವವರ್ಮನ ದೃಷ್ಟಿಗೆ ತರುವುದೇ ಒಳ್ಳೆಯದೆಂದು ಕೊಂಡನು. ಆಗ ಅವರ ದುಷ್ಟ ಪಥಕ ಕೊನೆ ಮುಟ್ಟದಂತೆ ತಡೆ ಬರಬಹುದು.

ರಾಜ್ಯವನ್ನಾಳುವ ರಾಜನಿಗೆ ತಿಳಿದ ಮೇಲೆ ಅವನು ಯಾವ ರೀತಿಯಲ್ಲಿ ಗಂಡಾಂತರವನ್ನು ಹೋಗ ಲಾಡಿಸುವನೆಂದು ನೋಡಿ, ಮತ್ತೆ ತಾನು ಕಾರ್ಯ ರಂಗಕ್ಕೆ ಹೋಗಬೇಕು. ಗುರುಗಳ ಉಪದೇಶ ಮೀರಿ ಸ್ವತಂತ್ರಿಸ ಬಿಡಬಾರದು. ಈ ದಾರುಣವಾದ ಘಟನೆ ಯನ್ನು ತಡೆಯುವದಂತೂ ಬೇಕೇ ಬೇಕು. ಆದಕ್ಕೆ ಈಗ ವಿಶ್ವವರ್ಮ ರಾಜನಿಗೆ ಇದನ್ನು ತಿಳಿಯ ಪಡಿಸುವ ಉಪಾಯ ಹೇಗೆ?

ಇದನ್ನು ಕುರಿತು ತೀವ್ರವಾದ ಆಲೋಚನೆಗೆ ತೊಡಗಿದನು ಅಪೂರ್ವ. (—ಇನ್ನೂ ಇದೆ)





# ಅಪೂರ್ವನ ಸಾಹಸ ಯಾತ್ರೆಗಳು

೧೪

[ರುದ್ರಪುರಿ ಯುವರಾಣಿಯ ಚಂದ್ರಕಾಂತ ಮಣಿಯನ್ನು ಅಪಹರಿಸಲಿಕ್ಕಾಗಿ ದುಷ್ಟ ಮಂತ್ರಿ. ಮಾಂತ್ರಿಕ ಮಿತ್ರರು ತಂತ್ರ ಮಾಡಿದರು. ಯುವರಾಣಿಯನ್ನು ಪ್ರಾಣದೊಂದಿಗೆ ತಂದೊಪ್ಪಿಸಬೇಕೆಂದು ವೃದ್ಧ ಮಾಂತ್ರಿಕಳು, ಮಾಂತ್ರಿಕನಿಗೆ ಆಜ್ಞೆ ಮಾಡಿದ್ದಳು. ದುರ್ಗಾ ಮಾತೆಯ ಆಲಯದ ಸುರಂಗ ಮಾರ್ಗದೊಳಗಿಂದಾಗಿ ಯುವ ರಾಣಿಯನ್ನು ಒಯ್ಯುವುದು ಅವರ ಉಪಾಯ. ಇದೆಲ್ಲಾ ಅಪೂರ್ವನಿಗೆ ಗೊತ್ತಾಯಿತು. —ಆಮೇಲೆ]

ಯುವರಾಣಿಯ ಜನ್ಮದಿನ ಸಮೀಪಿಸುತ್ತಾ ಇದೆ. ಘಾತಕನಾದ ಮಂತ್ರಿಯೂ, ದುರ್ಮಾಂತ್ರಿಕನೂ ಮಾಡಿಕೊಂಡ ದುಷ್ಟ ಪಥಕದಿಂದ ರಾಜಕುಮಾರಿಯನ್ನು ತಪ್ಪಿಸಲು, ರಾಜನಿಗೆ ಸ್ವತಃ ತಿಳಿಸಲು ಇಷ್ಟವಿಲ್ಲದೆ, ಅಪೂರ್ವನು ಸಮೀರನ ಬಳಿಗೆ ಹೋದನು.

ಅಪೂರ್ವನನ್ನು ನೋಡಿ ಸಮೀರನು ಅತ್ಯಂತ ಸಂತೋಷ ಸಂಭ್ರಮಪಟ್ಟನು. ಆಮೇಲೆ ಅಪೂರ್ವನು ಹೇಳಿದ ಸಂಗತಿಗಳನ್ನೆಲ್ಲಾ ಕೇಳಿ, ಅಪೂರ್ವನ ಅಭಿಪ್ರಾಯದಂತೆ ಆ ರಹಸ್ಯ ಘಾತವನ್ನು ರಾಜನಿಗೆ ತಾನು ತಿಳಿಸಲಿಕ್ಕಾಗಿ ಅಪೂರ್ವನೊಂದಿಗೆ ಹೊರಟನು.

ಆ ದಿನ ಮತ್ತೊಂದು ಕಾಳರಾತ್ರಿಯಾಗಿತ್ತು. ಅಂತಹ ಕರಾಳ ರಾತ್ರಿಯಲ್ಲಿ ವೀರವಿಕಟ ಮಾಂತ್ರಿಕನು ರಹಸ್ಯವಾಗಿ ಹೋಗಿ ಗೆಳೆಯ ಮಂತ್ರಿಯ ಮನೆಯ ಬಾಗಿಲನ್ನು ತಟ್ಟಿದನು. ಬಾಗಿಲು ತೆರೆದು ಹೊರಗೆ ಬಂದ ಮಂತ್ರಿ ವೀರವಿಕಟನನ್ನು ನೋಡಿ, "ಇದೇನು? ಈ ಅಪರಾತ್ರಿಯ ವೇಳೆಯಲ್ಲಿ ಬಂದೆಯೇನು ಮಿತ್ರಾ?" ಎಂದು ಕೇಳಿದನು. "ಅಪರಾತ್ರಿಯ ಹೊತ್ತಿನಲ್ಲಿ ಅಲ್ಲದೆ ನಾನು ಎಂದಾದರೂ ಹಟ್ಟೆ ಹಗಲು ಹೊತ್ತಿನಲ್ಲಿ ಬಂದಿದ್ದೇನೇನು?" ಎಂದು ವೀರವಿಕಟನು ಅವಹೇಳನೆ ಮಾಡುವಂತೆ ನಕ್ಕನು.



"ನಿನಗೆ ಗೊತ್ತಿಲ್ಲ, ಗುರು ಮಂತ್ರಗಾತಿನಿಯ ಮಹಿಮೆ. ಅವಳಿಗೊಂದು ಅನುಮಾನ ಬಂತೆಂದರೆ ಅದರಲ್ಲಿ ನಿಜವಿದ್ದೇ ತೀರುತ್ತದೆ. ನೀನು ಈ ಸಂಗತಿ ಯನ್ನು ನಿನ್ನ ಹೆಂಡತಿಗಾಗಲೀ, ಯಾವ ಪ್ರಾಣ ಸಮಾನ ಮಿತ್ರನಿಗಾಗಲೀ ಹೇಳಿರುವಿಯಾ? ಚೆನ್ನಾಗಿ ನೆನಪುಮಾಡಿ ಹೇಳು" ಎಂದು ಕೇಳಿದನು ಮಾಂತ್ರಿಕ.

"ಇಲ್ಲ! ಉಸಿರೆತ್ತಲಿಲ್ಲ. ನಮ್ಮೊಳಗಿನ ಮೈತ್ರಿಯ ಮೇಲೆ ಪ್ರಮಾಣ ಮಾಡಿ ಹೇಳುತ್ತೇನೆ" ಎಂದನು ಆ ಪ್ರಧಾನ ಮಂತ್ರಿ ದೃಢ ಸ್ವರದಲ್ಲಿ.

"ನಿನ್ನನ್ನು ನಂಬುತ್ತೇನಪ್ಪಾ. ಈಗ ನಮ್ಮ ಪಥಕವು ಸರಿಯಾಗಿ ನೆರವೇರಬೇಕಾದರೆ ನಾವು ಇನ್ನಷ್ಟು ಜಾಗರೂಕತೆ ವಹಿಸಿಕೊಳ್ಳಬೇಕು. ವಿಶ್ವಾಸ ಪಾತ್ರರಾದ ನಿನ್ನ ಭಟರನ್ನು ರಾಜಭವನದ ಸುತ್ತಲೂ ಕಾವಲಿರಿಸು. ಈ ಕಾವಲು ರಾತ್ರೀ ಹಗಲೂ ತಪ್ಪ ಬಾರದು. ಹೊಸಬರಾರೂ ರಾಜದರ್ಶನಕ್ಕೆ ಬರ ಬಾರದು. ಇಷ್ಟು ಹೆಚ್ಚಿನ ಕಟ್ಟುದಿಟ್ಟಗಳನ್ನು ಏಕೆ ಇಟ್ಟದ್ದೆಂಬುದರ ಗುಟ್ಟು ಯಾವ ನಿನ್ನ ವಿಶ್ವಾಸ ದವರಿಗೂ ತಿಳಿಯಬಾರದು. ಹಾಗಾರಾದರೂ ಕೇಳಿದರೆ ಒಂದು ರಹಸ್ಯ ಸಮಾಚಾರ ಬಂದಿರುವುದ ರಿಂದಲೇ ಎಂದು ಯಾರೂ ತಿರುಗಿ ಕೇಳದಂಥ ಮಾತು ಹೇಳಿ ಬಾಯಿ ಮುಚ್ಚಿಸಿಬಿಡು. ಅದು ನಿನ್ನ ಸಾಮರ್ಥ್ಯ. ಜ್ರಾಗತೆ!" ಎಂದು ಒಂದಕ್ಕೆ ಮೂರುಸಾರಿ ಕಟ್ಟೆಚ್ಚರ ಕೊಟ್ಟು ಹೋದನು.

ಬೆಳಗಾದ ಕೂಡಲೇ ಮಂತ್ರಿ ಮಾಂತ್ರಿಕನು ಹೇಳಿದಂತೆಯೇ ತಕ್ಕ ವಿಧದಲ್ಲಿ, ತನಗೆ ವಿಶ್ವಾಸ ಪಾತ್ರರಾದ ಭಟರನ್ನು ರಾಜ ಭವನದ ಸುತ್ತಲೂ ಕಾವಲಿರಿಸಿದನು.

ಹುಡುಗನಾದ ಸಮೀರನು ರಾಜನ ದರ್ಶನ ಕೇಳಿ ಬಂದನು. ಅವನಿಗೆ ಅನುಮತಿ ಸಿಗಲಿಲ್ಲ, ಗುಂಪಿನೆಡೆಯಲ್ಲಿ ನುಸುಳಲಿಕ್ಕೂ ಆಗಲಿಲ್ಲ.

"ಹಾಗೆಲ್ಲಾ ಅಂದುಕೊಳ್ಳಬೇಡಪ್ಪಾ. ಏನಾದರೂ ಅವಾಂತರ ಬಂದಿದೆಯೋ, ಅದಕ್ಕಾಗಿ ಬಂದಿರುವಿ ಯೇನೋ ಎಂದುಕೊಂಡು ಹಾಗೆ ಕೇಳಿದೆನು. ಹಾಗಾದರೆ ಆಗಬಾರದ್ದೇನೋ ಆಗಿದೆ ಅನ್ನು" ಎಂದನು ಮಂತ್ರಿ.

"ಹೌದು. ನೀನು ಅಂದುಕೊಂಡ ಹಾಗೇ ಆಗಿದೆ. ಅದಕ್ಕಾಗಿಯೇ ಬಂದಿದ್ದೇನೆ. ನಮ್ಮ ರಹಸ್ಯ ಪಥಕವು ಯಾರಿಗೋ ತಿಳಿದಂತೆ ನನ್ನ ಗುರು ಮಂತ್ರವಾದಿನೀಗೆ ತಿಳಿದುಹೋಯಿತೆಂದು ಆ ಮಂತ್ರವಾದಿನಿ ಭಾವಿಸು ತ್ತಾಳೆ. ನಮ್ಮ ಮೇಲೆ ಯಾರೋ ಕಣ್ಣಿಟ್ಟದ್ದಾರೆಂದು ಅವಳ ಗಟ್ಟಿ ನಂಬುಗೆ. ಇದಕ್ಕೆ ನೀನೇನೆನ್ನುವಿ?" ಎಂದು ವೀರವಿಕಟನು ಹುಬ್ಬು ಹಾರಿಸಿಕೊಂಡು ಹೇಳಿದನು.

"ಹಾಗಾಗಲಿಕ್ಕೆ ಸಾಧ್ಯವೇ ಇಲ್ಲ! ಅದೇನೋ ಅವಳ ಭ್ರಮೆಯಾಗಿರಬೇಕು" ಎಂದನು ಮಂತ್ರಿ ಬೆಚ್ಚರಬಿದ್ದ ಸ್ವರದಲ್ಲಿ.

ನಾಳೆಯೇ ಯುವರಾಣಿಯ ಜನ್ಮದಿನೋತ್ಸವ. ಕೋಲಾಹಲವಾದ ಏರ್ಪಾಡುಗಳು ನಡೆಯುತ್ತಾ ಇದ್ದುವು. ದುಷ್ಟ ಮಂತ್ರಿಯೂ, ಕೆಟ್ಟ ಮಾಂತ್ರಿಕನೂ, ಅವರಿಗಿಂತ ಭಯಂಕರಳಾದ ಮುದಿ ಮಾಂತ್ರಿಕಳೂ ಮಾಡಿದ ತಂತ್ರವನ್ನೂ ರಾಜನಿಗೆ ಹೇಗೆ ತಿಳಿಸುವು ದೆಂದು ಅಪೂರ್ವನು ತೀವ್ರಾಲೋಚನೆಗೆ ಬಿದ್ದನು.

ರಾಜನಿಗೆ ದಿನಾ ಭವನದ ಉಚ್ಚ ಭಾಗದಲ್ಲಿ ನಿಂತು ಸೂರ್ಯಾಸ್ತಮಾನದ ಸೊಗಸನ್ನು ನೋಡುತ್ತಾ ಇರುವ ಅಭ್ಯಾಸವಿರುತ್ತದೆ. ಸಮೀರನು ಈ ವಿಷಯ ವನ್ನು ಅಪೂರ್ವನೊಂದಿಗೆ ಹೇಳಿದನು.

ಕೂಡಲೇ ಅಪೂರ್ವನು ಭವನದ ಮೇಲ್ಭಾಗ ವನ್ನು ನೋಡಿದನು. ರಾಜನು ಅಲ್ಲಿರುವುದು ಕಂಡಿತು.

ಕೂಡಲೇ ಅಪೂರ್ವನು ಒಂದು ತಾಲಪತ್ರದಲ್ಲಿ ದುಷ್ಟರ ದುಸ್ತಂತ್ರವನ್ನು ಕುರಿತು, ಸಂಕ್ಷಿಪ್ತವಾಗಿ ಬರೆದು ಯುವರಾಣಿಗೂ, ದೇವಾಲಯದ ಅರ್ಚಕ ನಿಗೂ ಬಲವಾದ ಕಾವಲಿಡಬೇಕೆಂದೂ, ಯಾವ ಪರಿಸ್ಥಿತಿಯಲ್ಲಿಯೂ ಯುವರಾಣಿಯನ್ನು ವಿಗ್ರಹದ ಹಿಂಬದಿಗೆ ಹೋಗಲು ಬಿಡಬಾರದೆಂದೂ ಬರೆದು ದೂರದಲ್ಲಿ ಹಾರುತ್ತಿದ್ದ ಒಂದು ಹದ್ದನ್ನು ಕರೆದನು. ಅದು ಅಪೂರ್ವನ ಮುಂದೆ ಎರಗಿ, ಅವನು ಕೊಟ್ಟ ಪತ್ರವನ್ನು ಕಚ್ಚಿ ಹಿಡಿದುಕೊಂಡು ಮರುಕ್ಷಣವೇ ರಾಜ ಪ್ರಾಸಾದದ ಮೇಲೆ ಹಾರಿಹೋಯಿತು.

ಮೂಗಿನಲ್ಲಿ ಕಚ್ಚಿಕೊಂಡು ರಾಜ ಭವನದ ಮೇಲೆ ಹಾರುವ ಹದ್ದನ್ನು ಕಾವಲಿನ ಭಟನೊಬ್ಬನು ನೋಡಿ, ಉತ್ಸಾಹದಿಂದ ಅದರ ಮೇಲೊಂದು ಬಾಣಬಿಟ್ಟನು. ಬಾಣವು ಗುರಿ ತಪ್ಪಿತಾದರೂ, ಹದ್ದು ಬಾಣವನ್ನು ನೋಡಿ ಹೆದರಿ ಮತ್ತೊಂದು ದಿಕ್ಕಿಗೆ ಹಾರಿ ಹೋಯಿತು.

ಈ ಆಕಸ್ಮಿಕಾಘಾತದಿಂದಾಗಿ ಅಪೂರ್ವನು ಕಳುಹಿಸಿದ ತಾಲಪತ್ರವು ಕೊಕ್ಕಿನಿಂದ ಜಾರಿ ಕೋಟೆ ಸುತ್ತಲಿನ ನೀರು ತುಂಬಿದ ಅಗಳ್ತೆಯೊಳಗೆ ಬಿದ್ದಿತು.



ಹದ್ದು ತಿರುಗಿಹೋದುದನ್ನು ಅಪೂರ್ವನು ಗಮನಿಸಲಿಲ್ಲ. ಸಮೀರನಿಗೂ ತಿಳಿಯಲಿಲ್ಲ. ಅದು ತನ್ನ ಪತ್ರವನ್ನು ರಾಜನಿಗೆ ಒಪ್ಪಿಸಿರಬೇಕೆಂದು ಕೊಂಡು, ರಾಜನು ಯುವರಾಣಿಯ ರಕ್ಷಣೆಯ ಏರ್ಪಾಟನ್ನು ಮಾಡುವನೆಂದು ಭಾವಿಸಿ ಮುಂದೇ ನಾಗುವುದೆಂದು ಇದಿರು ನೋಡತೊಡಗಿದರು.

ರಾಜಧಾನೀ ನಗರವು ಬೆಳಂಜಾಮದಿಂದಲೇ ರಾಜಕುಮಾರಿಯ ಜನ್ಮದಿನೋತ್ಸವದ ವಿನೋದ ಕೂಟಗಳ ಕಾರಣದಿಂದ ಒಂದೊಂದು ರೀತಿಯ ಕಳೆಗಳಿಂದ ಬೆಳಗಲು ತೊಡಗಿತ್ತು. ರುದ್ರಪುರಿಯ ರಾಜ್ಯ ಪ್ರಮುಖರೂ, ನೆರೆಹೊರೆ ರಾಜ್ಯಗಳ ರಾಜ ಪ್ರತಿನಿಧಿಗಳೂ, ರಾಜ ಬಂಧು ಪರಿವಾರದವರೂ ಯುವರಾಣಿಗೆ ಶುಭಾಕಾಂಕ್ಷೆಗಳನ್ನು ತಿಳಿಯಪಡಿಸಲು ಪ್ರಾರಂಭಿಸಿದ್ದರು. ಜನರ ಸಂದಣಿಯಲ್ಲಿ ಸಮೀರನು ತಿರುಗುತ್ತಾ, ನಡೆಯುವುದನ್ನು ಆಗಿಂದಾಗಲೇ ಅಪೂರ್ವನಿಗೆ ತಿಳಿಸಿಕೊಂಡೇ ಇದ್ದನು.



ರಾಜನ ಮುಖದಲ್ಲಾಗಲೀ, ಯುವರಾಣಿಯ ಮುಖದಲ್ಲಾಗಲೀ, ಯಾವ ಮಾರ್ಪಾಡೂ ಇಲ್ಲದಿರುವುದನ್ನು ನೋಡಿ ಅಪೂರ್ವನು ಆಶ್ಚರ್ಯಪಡತೊಡಗಿದನು. ಯುವರಾಣಿಯನ್ನು ಕಾಪಾಡಲಿಕ್ಕಾಗಿ ಯಾವ ಏರ್ಪಾಡು ಕೂಡಾ ಅಪೂರ್ವನಿಗೆ ಕಾಣಿಸಲಿಲ್ಲ. ಹೊತ್ತು ಇಳಿಯುತ್ತಾ ಬರುವಾಗ ಯುವರಾಣಿ ಆಲಯಕ್ಕೆ ಹೊರಡಲು ತಯಾರಾದಳು. ಆನಂದದಿಂದ ಸಾವಿರಾರು ಮಂದಿ ಆ ಕಡೆಯಲ್ಲಿ ಗುಂಪುಗೂಡತೊಡಗಿದರು. ಯುವರಾಣಿ ರಾಜಭವನದ ಹೊರಭಾಗಕ್ಕೆ ಬಂದು ಅಲ್ಲಲ್ಲಿ ಕುಳಿತು ಶುಭಾಕಾಂಕ್ಷೆಗಳನ್ನು ಸ್ವೀಕರಿಸಿಕೊಳ್ಳುವಾಗ ಹತ್ತಿರವೇ ರಾಜನ ಮುಖದಲ್ಲಿ ಯಾವ ಚಂಚಲ ಭಾವವೂ ಕಾಣದಿರುವುದನ್ನು ನೋಡಿ ಅಪೂರ್ವನಿಗೆ ಸಂದೇಹ ಬಲವಾಗುತ್ತಾ ಹೋಯಿತು. ತಾನು ಹದ್ದಿನೊಂದಿಗೆ ಕಳುಹಿದ ತಾಳಪತ್ರವು ರಾಜನಿಗೆ ಸಿಗಲಿಲ್ಲವೆಂದು ಊಹಿಸಿಕೊಂಡನು ತನ್ನ ಗುರುವನ್ನು ನೆನೆಯುತ್ತ.

ಹೇಗೆಯೋ ಸಾಯಂಕಾಲವಾಯಿತು. ಯುವರಾಣಿಯೂ, ಗೆಳತಿ ಸೇವಿಕೆಯರೂ, ರಾಜನೂ ಇತರ ಪರಿವಾರದವರೂ ಮೆರೆವಣಿಯಾಗಿ ದುರ್ಗಾಮಾತಾಲಯಕ್ಕೆ ಹೊರಟದ್ದನ್ನು ಅಪೂರ್ವನು ನೋಡಿದನು.

ಕೂಡಲೇ ಸಮೀರನೊಂದಿಗೆ ಅವನೂ ಆಲಯದ ಕಡೆಗೆ ಹೊರಟನು. ತಾನು ಬರೆದು ಹದ್ದಿಗೆ ಕೊಟ್ಟ ಪತ್ರವು ವ್ಯರ್ಥವಾಯಿತೆನ್ನಲು ಇನ್ನೇನೂ ಸಂದೇಹ ಉಳಿಯಲಿಲ್ಲ.

ಯುವರಾಣಿ ಆನಂದದಿಂದ ತನ್ನ ಗೆಳತಿಯರೊಂದಿಗೆ ಆಲಯ ಪ್ರಾಂಗಣದೊಳಗೆ ಅಡಿಯಿಟ್ಟ ಕೂಡಲೇ ಅರ್ಚಕನ ವೇಷದಲ್ಲಿದ್ದ ಮಾಂತ್ರಿಕನು ತನ್ನ ಶಿಷ್ಯರೊಂದಿಗೆ ಇದಿರಾಗಿ ಬಂದು, ಅವಳನ್ನು ಒಳಗೆ ಕರೆದುಕೊಂಡು ಹೋದನು. ಯುವರಾಣಿ ದುರ್ಗಾ ಮಾತೆಯ ವಿಗ್ರಹದ ಮುಂದೆ ನಿಂತು ಭಕ್ತಿಯಿಂದ ಕೈಗಳನ್ನು ಜೋಡಿಸಿಕೊಂಡೆತ್ತಿ ನಮಸ್ಕಾರ ಮಾಡಿದಳು. ಅರ್ಚಕನು ಯಾವುದೋ ಮಂತ್ರವನ್ನು ಗಟ್ಟಿಯಾಗಿ ಉಚ್ಚರಿಸುತ್ತ, ಯುವರಾಣಿಯೊಂದಿಗೆ "ಬಾ ತಾಯಿ, ದುಷ್ಟಸಂಹಾರಿಣಿಯಾದ ಮಾತಾದೇವಿಗೆ ಮೂರುಸಾರಿ ಪ್ರದಕ್ಷಿಣೆ ಮಾಡುವುದು ಶುಭಪ್ರದ. ಬಾ" ಎಂದು ಮುಂದಕ್ಕೆ ನಡೆದನು. ಯುವರಾಣಿ ಅವನನ್ನು ಅನುಸರಿಸಿದಳು.

ಆ ಕೃತ್ರಿಮ ಅರ್ಚಕನು ಹಿಂದಕ್ಕೆ ತಿರುಗಿ, "ಯುವರಾಣಿಯ ಹೊರತು ಬೇರೆ ಯಾರೂ ಬರಬೇಡಿ. ಅವಳಿಂದ ಕೆಲವು ಪ್ರತ್ಯೇಕವಾದ ಪೂಜೆ ಮಾಡಿಸಬೇಕು. ನೀವೆಲ್ಲಾ ಅಲ್ಲಲ್ಲೇ ನಿಲ್ಲಿರಿ" ಎಂದನು ಅವಳ ಗೆಳತಿಯರಿಗೆ.

ಗೆಳತಿ ಪರಿಚಾರಿಕೆಯರೆಲ್ಲಾ ಅರ್ಚಕನ ಮಾತನ್ನು ಮೀರಲು ಹೆದರಿ, ಹಾಗೆಯೇ ನಿಂತುಬಿಟ್ಟರು.

ಆ ಕಳ್ಳ ಅರ್ಚಕನ ಶಿಷ್ಯರಿಬ್ಬರೂ ಮಂತ್ರಗಳನ್ನು ಉಚ್ಚರಿಸತೊಡಗಿದರು. ಘಂಟಾಮಣಿಗಳಿಂದ

ಢಾ ಢಾ ಭಜಂತ್ರೀ. ಘಂಟಾನಾದ ಧ್ವನಿಗಳಿಂದ ಅಲ್ಲೆಲ್ಲಾ ಏನೂ ಕೇಳಿಸದಂತೆ ದೊಡ್ಡ ಮಾರ್ಮೊಳಗೆ ನಾದಮಯವಾಯಿತು.

ಯುವರಾಣಿ ಗರ್ಭಗೃಹದ ಒಳಬದಿಗೆ ಹೋದ ಕೂಡಲೇ ಅರ್ಚಕನ ವೇಷದಲ್ಲಿದ್ದ ಮಾಂತ್ರಿಕನು ಅವಳನ್ನು ಗಭಕ್ಕನೆ ಎಳೆದು ಸುರಂಗ ಮಾರ್ಗದೊಳಗೆ ದೂಡಿ ತಾನೂ ಅವಳ ಹಿಂದೆಯೇ ಇಳಿದು ಸುರಂಗ ಮಾರ್ಗದ ದ್ವಾರವನ್ನು ಮುಚ್ಚಿಬಿಟ್ಟನು.

ರಾಜ ಪರಿವಾರದವರೆಲ್ಲಾ ಆಲಯದ ಹೊರಭಾಗದಲ್ಲೇ ಇದ್ದರು. ಸಮೀರನು ಜನರ ಮಧ್ಯದಿಂದ ಮಿಂಚಿನ ವೇಗದಲ್ಲಿ ತೂರಿ ಹೊರಗೆ ಬಂದು, "ಮಹಾರಾಜರೇ! ಘೋರವಾಗಿ ಹೋಯಿತು! ಯುವರಾಣಿಯನ್ನು ಅಪಹರಿಸಿಬಿಟ್ಟರೂ! ಎತ್ತಿಕೊಂಡು ಹೋದರೋ ಹೋದರು! ಭಟರೆಲ್ಲಾ ಅತ್ತಕಡೆಗೆ ಓಡಲಿ!" ಎಂದನು ಗಟ್ಟಿಯಾಗಿ!

ರಾಜನು ವಿಚಿತ್ರವಾಗಿ ಅವನನ್ನು ನೋಡಿದನು.

"ನಾನು ಸಮೀರ! ಮಹಾರಾಜರೇ? ನನ್ನನ್ನು ಬಲ್ಲಿರಷ್ಟೆ? ಮರೆತಿದ್ದರೆ ಈಗ ನನ್ನ ಮಾತು ನಂಬಿರಿ. ಯುವರಾಣಿಯನ್ನು ಮಾಂತ್ರಿಕನು ಅಪಹರಿಸಿಕೊಂಡು ಹೋಗಿಬಿಟ್ಟ!" ಎಂದನು ಸಮೀರ.

"ಯುವರಾಣಿ ದುರ್ಗಾ ಮಾತೆಯ ಆಲಯದೊಳಗೆ ಹೋದಳಲ್ಲಪ್ಪಾ! ಅಪಹರಿಸುವುದೇನು ಬಂತು!" ಎಂದನು ರಾಜ.

"ಈಗ ಯುವರಾಣಿ ಆಲಯದೊಳಗಿಲ್ಲ! ಸುರಂಗದಲ್ಲಿದ್ದಾಳೆ!" ಎಂದನು ಸಮೀರ.

"ಹಾಗೇನು!" ಎಂದು ರಾಜನು ಆಲಯದೊಳಗೆ ನಡೆದನು. ಅಷ್ಟರಲ್ಲಿ ಯುವರಾಣಿಯ ಗೆಳತಿಯರೆಲ್ಲಾ "ಯುವರಾಣಿ ಕಾಣೆ! ಎಲ್ಲಿ? ಎಲ್ಲಿ?" ಎಂದು ಕೂಗುತ್ತಾ, ಇದಿರಾಗಿ ಓಡಿ ಬಂದರು.

ಅಲ್ಲಿಂದ ಓಡಿಹೋಗಬೇಕೆಂದು ನೋಡುತ್ತಿರುವ ಮಾಂತ್ರಿಕನ ಶಿಷ್ಯರನ್ನು ನೋಡಿದ ಕೂಡಲೇ



ಸಮೀರನು, "ಮಹಾರಾಜಾ! ಆ ದುಷ್ಟರನ್ನು ಹಿಡಿದು ಕಟ್ಟಿಸಿರೀ!" ಎಂದು ಕೂಗಿ ಹೇಳಿದನು.

ಕೂಡಲೇ ಆ ಶಿಷ್ಯರಿಬ್ಬರನ್ನೂ ಭಟರು ಹಿಡಿದರು.

ಸಮೀರನು "ಮಹಾರಾಜರೇ! ಬಹು ಬೇಗದಲ್ಲಿ ಸುರಂಗ ಮಾರ್ಗದ ಕೊನೇ ಬಾಗಿಲಿನ ಹತ್ತಿರ ಹೋಗಬೇಕು. ತಡವೇ ಆಗಬಾರದು!" ಎಂದನು.

ರಾಜನೂ ಸೇನಾನಾಯಕನೂ ಸಮೀರನೂ ಕೆಲವು ವೀರಭಟರೂ ಬೇಗ ಬೇಗ ಕುದುರೆಗಳ ಮೇಲೇರಿ ಅರಣ್ಯದ ಮಧ್ಯದಲ್ಲಿರುವ ಸುರಂಗ ಮಾರ್ಗದ ಆಚೆಯ ಕೊನೆಯನ್ನು ಸೇರಿಕೊಂಡರು.

ಸಮೀರನು ಸೇನಾನಾಯಕನು ಕುದುರೆಯ ಮೇಲಿನಿಂದ ಕೆಳಗೆ ಇಳಿಯುತ್ತ, "ಅದೋ! ಅಲ್ಲಿರುವ ಆ ಮಂತ್ರದ ಮಾರಮ್ಮ ಮುದುಕೀನ ಹಿಡಿದು ಕಟ್ಟಿಸಿಬಿಡೀ!" ಎಂದನು.

"ಆಹಾಹಾ! ನನ್ನನ್ನು ಬಂಧಿಸುವಂಥಾ ಸಮರ್ಥರು ಬಂದರೋ! ಈಗಲೇ ಅವರನ್ನೆಲ್ಲಾ



ಭಸ್ಮಮಾಡಿ ಬಿಡುತ್ತೇನೆ!" ಎನ್ನುತ್ತಾ ಮರದ ಕೊಂಬೆಯಲ್ಲಿದ್ದ ಮುದಿ ಮಂತ್ರಗಾತಿ ವಿಕಟವಾಗಿ ನಗತೊಡಗಿದಳು.

ಗೋಳೀಮರದ ಕೊಂಬೆಯಲ್ಲಿದ್ದ ಆ ಮಂತ್ರಗಾತಿಯ ವಿಕೃತ ಶಬ್ದವನ್ನು ಎಲ್ಲರೂ ಕೇಳಿ ಅತ್ತ ನೋಡಿದರು.

"ಏಯ್! ಮುದುಕೀ! ಕುಳಿತ ಜಾಗದಿಂದ ಕದಲಿದೆಯೋ ನೀನೇ ಭಸ್ಮವಾಗುವಿ! ಜಾಗ್ರತೆ!" ಎಂಬೊಂದು ತೀಕ್ಷ್ಣವೂ ಗಂಭೀರವೂ ಆದ ಸ್ವರ ಮಾರ್ಮೊಳಗಿತು!

ಎಲ್ಲರೂ ಆ ಕಂಠಸ್ವರ ಬಂದ ದಿಕ್ಕಿನ ಕಡೆಗೆ ಮುಖ ತಿರುಗಿಸಿದರು.

ಅಲ್ಲಿ ದಿವ್ಯ ತೇಜಸ್ಸಿನೊಂದಿಗೆ ಒಬ್ಬ ಮುನಿಪುಂಗವನು ಕಂಡುಬಂದನು. ಮುನಿಯನ್ನು ನೋಡಿದ ಕೂಡಲೇ ಸಮೀರನು ಓಡಿಹೋಗಿ ಅವನ ಪಾದಗಳಿಗೆ ನಮಸ್ಕಾರ ಮಾಡಿ "ಏನಾದರೂ ಜಟಿಲ ಸಮಸ್ಯೆ ಬಂದಾಗ ತಾವೇ ಸ್ವತಃ ಬರುವಿರೆಂದು ಅಪೂರ್ವನು ಹೇಳಿದ್ದಾನೆ ಸ್ವಾಮೀ" ಎಂದನು.

ಸದಾನಂದ ಮುನಿ ಮುಗುಳುನಗು ಮಿನುಗಿಸಿ, "ಹೌದಪ್ಪಾ, ನೀನು ಹೇಳಿದ್ದು ನಿಜವೇ. ಧ್ಯಾನದಲ್ಲಿರುವಾಗ ಅಪೂರ್ವನ ಕರೆಯನ್ನು ಕೇಳಿ, ಹೀಗೆ ಬಂದೆನು. ಅಗೋ! ಅಲ್ಲಿ ಕುಳಿತಿರುವವಳು ಮಾಮೂಲು ಮಂತ್ರಗಾತಿಯಲ್ಲ. ಮಹಾ ಶಕ್ತಿ ಪಡೆದಿರುವ ಪರಮ ದುಷ್ಟಳು, ಕ್ರೂರಾತಿ ಕ್ರೂರಳು. ಪ್ರಕೃತಿ ವಿರುದ್ಧವಾಗಿ ಪರರ ಯೌವನವನ್ನು ವಶಪಡಿಸಿಕೊಂಡು ಅನೇಕ ಶತಮಾನಗಳವರೆಗೆ ಬದುಕಬಲ್ಲಂಥವಳು! ಈಗ ಇಲ್ಲಿಯ ಯುವರಾಣಿಯ ಯೌವನವನ್ನು ಹೀರಲು ಪಥಕ ಹಾಕಿದ್ದಾಳೆ. ಇದೇ ಅವಳ ಕೊನೇ ಗುರಿ! ಈಗ ಅವಳ ಶಕ್ತಿಗಳನ್ನೆಲ್ಲಾ ನಾಶಮಾಡಿದ್ದೇನೆ!" ಎಂದನು.

ಅದನ್ನು ಕೇಳಿಸಿಕೊಂಡ ಆ ಮುದಿ ಮಂತ್ರಗಾತಿ, "ಏಯ್! ಮುನಿಯೇ! ನೀನು ನನ್ನ ಎಲ್ಲಾ ಶಕ್ತಿಯನ್ನೂ ನಾಶಮಾಡಲು ಸಾಧ್ಯವಿಲ್ಲ. ನನ್ನ ಹತ್ತಿರ ಇನ್ನೂ ಒಂದು ದೊಡ್ಡ ಶಕ್ತಿ ಉಳಿದೇ ಇದೆ!" ಎಂದು ಅಡವಿ ನಡುಗುವ ಹಾಗೆ ನೋವಿನ ಆರ್ತನಾದದಿಂದ ಆರ್ಭಟಿಸುತ್ತ, ಕಿರಿಚು ನಗುತ್ತ, ಭಗಭಗನೆ ಉರಿದು ಸುಟ್ಟು ಬೂದಿಯಾಗಿ ಹೋದಳು!

ಆ ಭಯಂಕರ ದೃಶ್ಯದಿಂದ ಬೆಚ್ಚರಬೆರಗಾಗಿ ನಿಂತ ರಾಜನು ಸದಾನಂದ ಮುನಿಯ ಕಾಲಿಗೆ ಬಾಗಿ, ಗದ್ಗದ ಕಂಠದಿಂದ, "ಮಹಾತ್ಮಾ, ನನ್ನ ಮಗು ಕ್ಷೇಮವಾಗಿದ್ದಾಳೆಯೇ?" ಎಂದನು.

"ಅಪೂರ್ವನು ಕಾಣುವುದಿಲ್ಲವಲ್ಲಾ?" ಎಂದನು ಸಮೀರ. ಮುನೀಂದ್ರನು ಅಭಯಮುದ್ರೆ ತೋರಿಸಿ, "ವೃದ್ಧ ಮಂತ್ರಗಾತಿ ತನ್ನ ವ್ರತವು ನಿಷ್ಪ್ರಯೋಜನವಾದುದು ಗೊತ್ತಾದ ಕೂಡಲೇ ಸುರಂಗದೊಳಗಿರುವ ವೀರವಿಕಟ ಮಂತ್ರವಾದಿಗೆ ತಿಳಿಸಿದಳು. ಆ ಸುರಂಗದೊಳಗೆ ಈ ಕಡೆಗೆ ಬರುತ್ತಿದ್ದ ವೀರ

ಮಾಂತ್ರಿಕನು, ತಾನು ಒತ್ತಿ ಎತ್ತಿಕೊಂಡಿದ್ದ ಯುವರಾಣಿಯ ಚಂದ್ರಕಾಂತ ಮಣಿಯನ್ನು ಕಿತ್ತುಕೊಂಡು. ಅವಳನ್ನೇ ಅಡ್ಡವಾಗಿರಿಸಿ, ತನ್ನ ಪ್ರಾಣ ಉಳಿಸಿಕೊಳ್ಳಬೇಕೆಂದು ನೋಡಿದನು. ಅದಕ್ಕೆ ಮೊದಲೇ ಅಪೂರ್ವನು ಆ ಕನ್ನದೊಳಗೆ ಪ್ರವೇಶಿಸಿ ಸುರಂಗದೊಳಗೆ ಹೋಗಿ, ಮಾಂತ್ರಿಕನೊಂದಿಗೆ ಹೋರಾಡಿ ಅವನನ್ನು ಕಟ್ಟಿ ಹಾಕಿಬಿಟ್ಟನು. ಇನ್ನು ಆ ನನ್ನ ಅಪೂರ್ವ ಕುಮಾರನು ನಿಮ್ಮ ಯುವರಾಣಿ ಕುಮಾರಿಯನ್ನು ಕ್ಷೇಮದಿಂದ ಕರೆದುಕೊಂಡು ಬರುತ್ತಾನೆ!" ಎಂದನು ಸದಾನಂದ ಮುನಿ.

ಅಷ್ಟರಲ್ಲೇ ಗೋಳಿಮರದ ಸಮೀಪದಲ್ಲಿ ಭೂಮಿಯ ಅಡಿಯಿಂದ ಹೊರಡುವ ಗುಡುಗಿನಂತಹ ಶಬ್ದ ಕೇಳಿಸಿತು. ನೋಡ ನೋಡುತ್ತಿರಲು ಸುರಂಗ ಮಾರ್ಗದ ದ್ವಾರದೊಳಗಿನಿಂದ ದಿವ್ಯ ಪುರುಷನ ಹಾಗೆ ಕಾಣಿಸುವ ಒಬ್ಬ ಯುವಕನು ಹಿಂಗಟ್ಟು ಮುರಿಗಟ್ಟಿ ಹಾಕಲ್ಪಟ್ಟ ವೀರವಿಕಟ ಮಾಂತ್ರಿಕನನ್ನು ಎಳೆದುಕೊಂಡು ಮೇಲೆ ಬಂದನು. ಮಾಂತ್ರಿಕನು ಕಪ್ಪಿಟ್ಟ ಮುಖವನ್ನು ತಗ್ಗಿಸಿಕೊಂಡು ನೆಲವನ್ನು ನೋಡುತ್ತಿದ್ದನು. ಅವರ ಹಿಂದಿನಿಂದಲೇ ಕ್ಷೇಮವಾಗಿರುವ ಯುವರಾಣಿ ತಂದೆಯನ್ನು ನೋಡಿದ ಕೂಡಲೇ ಓಡಿಬಂದು ಪಕ್ಕದಲ್ಲಿ ನಿಂತಳು.

ಯುವಕನು ಮುನಿಯ ಪಾದಗಳಿಗೆ ನಮಸ್ಕರಿಸಲು ಬಾಗುತ್ತಿರಲು, ಮುನಿ ಆಪ್ಯಾಯತೆಯಿಂದ ಅವನನ್ನು ತಡೆದು, "ಕಂದಾ, ಅಪೂರ್ವಾ! ನೀನು ಮಾಮೂಲು ಮಾನವಾಕಾರ ಪಡೆಯಲಿಕ್ಕಾಗಿ ತಕ್ಕ ಸಮಯವೀಗ ಬಂದಿದೆ. ಇನ್ನು ಮೇಲೆ ಹೀಗೆಯೇ ಇರುವಿ!" ಎಂದನು ಆಶೀರ್ವಾದದ ಮುದ್ರೆ ತೋರಿಸುತ್ತ.

"ಅಪ್ಪಾ! ನನ್ನನ್ನು ಭದ್ರವಾಗಿ ಕಾಪಾಡಿದವನು ಈ ಯುವಕನೇ" ಎಂದಳು ಅಪೂರ್ವನನ್ನು ತೋರಿಸುತ್ತ, ಯುವರಾಣಿ.

"ಇಂಥಾ ಮಹೋಪಕಾರ ಮಾಡಿದವನನ್ನು ಈ ಜನ್ಮದಲ್ಲಿ ಮರೆಯಲಾರೆನು!" ಎಂದು ರಾಜನು ತೀರಾ ಹೊಸಬನಾದ ಅಪೂರ್ವನನ್ನು ಆಶ್ಚರ್ಯದಿಂದ ನೋಡುತ್ತಾ ಹೇಳಿದನು.



"ನಾನು ಬಂದ ಕೆಲಸ ಮುಗಿಯಿತು. ಇನ್ನು ಹೋಗಿ ಬರುತ್ತೇನೆ" ಎಂದನು ಸದಾನಂದ ಮುನಿ.

"ನಾನೂ ನಿಮ್ಮೊಂದಿಗೆ ಬರುತ್ತೇನೆ. ನನ್ನ ಕೆಲಸವೂ ಮುಗಿಯಿತಷ್ಟೆ?" ಎಂದನು ಅಪೂರ್ವ.

"ನಿನ್ನನ್ನು ಕರೆದುಕೊಂಡು ಹೋಗಲಿಕ್ಕೋ ನಿನಗೆ ಈ ಮಾನವ ರೂಪ ಬರುವ ಹಾಗೆ ಮಾಡಿದ್ದೆಂದುಕೊಂಡೆಯಾ? ಈವರೆಗೆ ನೀನು ಯಾರಿಗೂ ಕಾಣದಂತೆ ವಿಚಿತ್ರ ಬೊಂಬೇ ಮನುಷ್ಯನಂತಿದ್ದು, ಒಳ್ಳೆಯವರಿಗೆ ಒಳ್ಳೆಯದು ಮಾಡುತ್ತಾ ಬಂದಿರುವಿ. ಇನ್ನು ಮೇಲೆ ನೀನು ಎಲ್ಲರಂತಿರುವ ಮಾನವನಾಗಿ, ಧೈರ್ಯ ಸಾಹಸಗಳಿಂದ, ಧರ್ಮ ರೀತಿಯ ಪ್ರಜಾ ನಾಯಕನಾಗಿ ನಿನ್ನ ಕರ್ತವ್ಯವನ್ನು ಮಾಡುತ್ತಾ ಬರಬೇಕು!" ಎಂದನು ಸದಾನಂದ ಮುನಿ ನಗುತ್ತಾ.

"ಅದು ಹೇಗೆ ಸಾಧ್ಯ?" ಎಂದನು ಅನುಮಾನದಿಂದ ಅಪೂರ್ವ.

"ಈ ಕ್ಷಣದಿಂದ ಈ ರಾಜ್ಯವೆಲ್ಲಾ ನಿನ್ನ ಅಧೀನಕ್ಕೆ ಬಂತೆಂದು ತಿಳಿ. ಮಹಾಮುನಿಯವರು ಒಪ್ಪುವುದಾದರೆ ನೀನೇ ನನ್ನ ರಾಜ್ಯಕ್ಕೆ ವಾರಸನಾಗಲು ಸಾಧ್ಯವಿದೆ. ನಿನಗೂ ನನ್ನ ಕುಮಾರಿಗೂ ಇಷ್ಟವಾಗುವುದಾದರೆ, ಈ ಯುವರಾಣಿಯ ಸೋದರ ಮಾವನ ರಾಜ್ಯ ಲಾವಣ್ಯಪುರಿಗೆ ಕೂಡಾ ನೀನೇ ಅಧಿಪತಿಯಾಗುವಿ!" ಎಂದನು ರಾಜ.

ಅಪೂರ್ವನು ಯುವರಾಣಿಯನ್ನು ನೋಡಿದ. ಅವಳು ಲಜ್ಜೆಯಿಂದ ಬೆವ್ವೊಗವಾಡಿಕೊಂಡು ತಲೆ ತಗ್ಗಿಸಿದಳು.

ಸದಾನಂದ ಮುನಿ ಅವರಿಬ್ಬರನ್ನೂ ಹತ್ತಿರಕ್ಕೆ ಕರೆದು, "ನೀವಿಬ್ಬರೂ ಮುಂದೆ ಮುಂದೆ ಮಾನವಾಳಿಗೆ ಮೇಲಾಗುವಂತಹ ಘನಕಾರ್ಯಗಳನ್ನೆಷ್ಟೋ ಸಾಧಿಸುತ್ತ ಮುಂದಿನ ತಲೆಮಾರಿನವರಿಗೆ ಆದರ್ಶರಾಗುವ ದಂಪತಿಗಳಾಗುವಿರಿ!" ಎಂದು ಆಶೀರ್ವಾದ ಮಾಡಿ, ಅಂತರ್ಧಾನನಾಗಿ ಹೋದನು.

ಎಲ್ಲರೂ ಆಶ್ಚರ್ಯಾತಿಶಯದಿಂದ ಆ ಕಡೆಗೆ ನೋಡುತ್ತ ಕೈಮುಗಿದು ನಿಂತರು. ಅನಂತರ ಅವರೆಲ್ಲರಿಗೂ ಆದ ಆನಂದಕ್ಕೆ ಅದ್ಯಂತವಿಲ್ಲದಂತಾಯಿತು.

ರಾಜನು ಮಂತ್ರಿಯನ್ನೂ ಮಾಂತ್ರಿಕನನ್ನೂ ಶಿಷ್ಯರನ್ನೂ ಸೆರೆಶಾಲೆಗೆ ಕಳುಹಿಸಿದನು.

ಯುವರಾಣಿಯೊಂದಿಗೆ ಆಯೋನಿಜ ಅಪೂರ್ವನ ವಿವಾಹ ಮಹೋತ್ಸವ, ಅತಿ ವೈಭವದಿಂದ ನಡೆಯಿತು. ರಾಜನು ಅಪೂರ್ವನಿಗೆ ರಾಜ್ಯಾಭಿಷೇಕ ಮಾಡಿದನು. ಅಪೂರ್ವನು ಸಮೀರನನ್ನು ತನ್ನ ಪ್ರಧಾನ ಮಂತ್ರಿಯಾಗಿರಿಸಿಕೊಂಡು ಪ್ರಜಾರಂಜಕನಾಗಿ ತನ್ನ ಪರಿಪಾಲನೆ ಸಾಗಿಸಿಕೊಂಡಿದ್ದನು.

—(ಮುಗಿಯಿತು)

